## ಪ್ರಾಥಮಿಕ ತರಗತಿಗಳಲ್ಲಿ ಭಾಷಾ ಶಿಕ್ಷಣದ ತಿಳಿವು

**ಹೃದಯಕಾಂತ ದೀವಾನ್**

### ಭಾಷೆಯನ್ನು ಹೇಗೆ ತಿಳಿದುಕೊಳ್ಳುವುದು

ಪ್ರಾಥಮಿಕ ಶಾಲೆಯಲ್ಲಿ ಭಾಷಾ ಶಿಕ್ಷಣದ ಪರಿಪ್ರೇಕ್ಷ್ಯಕ್ಕೆ(ಕಣ್ಣೆಲೆ, ನೋಟ) ಸಂಬಂಧಿಸಿದಂತೆ ಯೋಚಿಸುವಾಗ ಏಳುವ ಮೊದಲ ಪ್ರಶ್ನೆಯೆಂದರೆ ನಾವು ಭಾಷೆಯನ್ನು ಹೇಗೆ ಅರ್ಥಮಾಡಿಕೊಳ್ಳುತ್ತೇವೆ(ತಿಳಿದುಕೊಳ್ಳುತ್ತೇವೆ) ಎಂಬುದು. ಇದರ ಬಗ್ಗೆ ಸಾಕಷ್ಟು ಮಾತು-ಕತೆ ಆಗಿದೆ. ಭಾಷೆಯನ್ನು ಮನುಷ್ಯನನ್ನು ರೂಪಿಸುವ ವಸ್ತುವಿನ ರೂಪದಲ್ಲಿ ನೋಡಬೇಕೆಂಬ ಅಂಶವನ್ನು ಅಧ್ಯಯನಕಾರರು ಗೆರೆ ಎಳೆದು ತೋರುತ್ತಾರೆ. ವಸ್ತುತಃ ಭಾಷೆ ಮತ್ತು ಮನುಷ್ಯ ಒಂದು ಇನ್ನೊಂದನ್ನು ರೂಪಿಸುತ್ತವೆ. ಅಲ್ಲದೆ ಇವುಗಳಲ್ಲಿ ಪಾರಸ್ಪರಿಕವಾದ ಬಹಳ ಗಾಢವಾದ ಸಂಬಂಧವಿದೆ. ಭಾಷೆಯು ಕೇವಲ ಮಾತು-ಕತೆಯ ಮಾಧ್ಯಮವಲ್ಲ; ಹಾಗೂ ಕೇವಲ ಶಬ್ದಗಳು, ಮಾತುಗಳು ಮತ್ತು ವಾಕ್ಯಗಳ ಜಾಲವಲ್ಲ. ಶಾಲೆಗೆ ಬರುವ ಪ್ರತಿಯೊಬ್ಬ ಬಾಲಕನೂ(=ಮಗುವೂ) ತನ್ನ ಭಾಷೆಯನ್ನು ತಿಳಿದುಕೊಂಡಿರುವುದಷ್ಟೇ ಅಲ್ಲ; ಬದಲಿಗೆ ಆ ಭಾಷೆಯೊಂದಿಗೆ ಅವನ ಅಂತರಂಗದ ಸಂಬಂಧವಿದೆ ಮತ್ತು ಅವನು ಪ್ರೌಢನೊಬ್ಬನು ಭಾಷೆಯಲ್ಲಿ ಮಾಡಬಹುದಾದ್ದೆಲ್ಲವನ್ನೂ ಮಾಡುತ್ತಾನೆ. ಅವನು ಎಲ್ಲ ಮಾತನ್ನೂ ಆಡಬಲ್ಲನು, ಎಲ್ಲ ಬಗೆಯ ಸಂವಾದದಲ್ಲಿ(ಸಂಭಾಷಣೆ) ಪಾಲ್ಗೊಳ್ಳಬಲ್ಲನು. ತನ್ನ ವಿಚಾರಗಳನ್ನು ಒಟ್ಟುಗೂಡಿಸಬಲ್ಲನು ಅಥವಾ ತನ್ನ ಅಭಿಪ್ರಾಯವನ್ನು ಇಟ್ಟುಕೊಳ್ಳಬಲ್ಲನು. ತನ್ನ ಕಾರ್ಯಯೋಜನೆಯನ್ನು ರೂಪಿಸಬಲ್ಲನು. ಜೊತೆಗಾರರೊಂದಿಗೆ ಹಂಚಿಕೊಳ್ಳಬಲ್ಲನು. ಅವರ ಅಭಿಪ್ರಾಯಗಳನ್ನು ಕೇಳಿ ಒಂದು ಸಾಮಾನ್ಯ ತಿಳಿವಳಿಕೆಯನ್ನು ರೂಪಿಸಿ ಸೇರಿಕೊಂಡು(ಮಿಳಿತಗೊಂಡು) ಕಾರ್ಯ ಮಾಡಬಲ್ಲನು. ತನ್ನ ಭಾಷೆಯಲ್ಲಿ ವ್ಯಾಕರಣದ ಯಾವುದೇ ತಪ್ಪುಗಳನ್ನೂ ಮಾಡುವುದಿಲ್ಲ. ಅವನ ವ್ಯಾಕರಣ, ಸಾಮಾನ್ಯ ವ್ಯಾಕರಣಕ್ಕಿಂತ ಸ್ವಲ್ಪ ಮಟ್ಟಿಗೆ ಭಿನ್ನವಾಗಿರಬಹುದು, ಆದರೆ ಅವನ ಸಂದರ್ಭ ಮತ್ತು ಅವನ ಕುಟುಂಬದಲ್ಲಿ ಬಳಕೆ ಮಾಡಲಾಗುವ ವ್ಯಾಕರಣವನ್ನು ಅವನ ವ್ಯಾಕರಣ ಹೋಲಬಹುದು(ಹೊಂದಿಕೆಯಾಗಬಹುದು). ಬಾಲಕ ಶಾಲೆಗೆ ಬರುವುದಕ್ಕೆ ಮುಂಚೆ ಅವನ ಸುತ್ತಮುತ್ತ ಆಡಲಾಗುವ ಅನೇಕ ಭಾಷೆಗಳನ್ನು ತಿಳಿದುಕೊಂಡಿರುತ್ತಾನೆ. ಅಂದರೆ ಅವನಲ್ಲಿ ಅನೇಕ ಭಾಷೆಗಳನ್ನು ಒಟ್ಟೊಟ್ಟಿಗೇ ಕಲಿಯುವ ಸಾಮರ್ಥ್ಯವಿರುತ್ತದೆ ಮತ್ತು ಆ ಭಾಷೆಗಳನ್ನು ಬೇರೆ ಬೇರೆಯಾಗಿ ಬಳಕೆ ಮಾಡುವಲ್ಲಿ ಒಂದು ಮಿತಿಯ ಹೊರಗೆ ಸಮಸ್ಯೆ ಸಹ ಉಂಟಾಗುವುದಿಲ್ಲ; ಬದಲಿಗೆ ಈ ಭಾಷೆಗಳನ್ನು ಬಳಸುತ್ತ ಅವನು ಇನ್ನೊಂದು ಭಾಷೆಯನ್ನು ಸಮೃದ್ಧಗೊಳಿಸುತ್ತಿರುತ್ತಾನೆ ಎಂಬುದನ್ನು ಕೂಡ ನಾವು ಬಲ್ಲೆವು. ಈ ಹುಡುಗ ಪ್ರಾಥಮಿಕ ತರಗತಿಗಾಗಿ ಶಾಲೆಗೆ ಬಂದಾಗ ಅವನ ಪರಿಪ್ರೇಕ್ಷ್ಯ ಏನಾಗಿರಬೇಕೆಂಬುದೇ ಈಗಿನ ಪ್ರಶ್ನೆ. ಹುಡುಗನಿಗೆ ಭಾಷೆ ಗೊತ್ತಿಲ್ಲ, ಧ್ವನಿ ಮತ್ತು ಶಬ್ದಗಳ ಸಂಬಂಧ ಅಂದರೆ ಏನು ಅಂತ ಅವನಿಗೆ ಗೊತ್ತಿಲ್ಲ, ವಾಕ್ಯ ರಚನೆಯ ಜ್ಞಾನವಿಲ್ಲ

ಎಂದೆಲ್ಲವನ್ನೂ ಒಪ್ಪಿಕೊಂಡು ಮುಂದೆ ಸಾಗೋಣವೆ ಅಥವಾ ಅವನ ತಿಳಿವಳಿಕೆಯ ಬಗ್ಗೆ ತಿಳಿದುಕೊಂಡು ಭಾಷೆಯ ಪಾಠದ ರೀತಿಯನ್ನು ಕುರಿತು ಯೋಚಿಸೋಣವೆ ಮತ್ತು ಅದರ ಸ್ವರೂಪ ಏನಾಗಿರಬೇಕು ಎಂದು ಯೋಚಿಸೋಣ.

ಭಾಷಿಕ (=ಭಾಷೆಗೆ ಸಂಬಂಧಿಸಿದ) ಕೌಶಲ ಮತ್ತು ಅವುಗಳ ತಿಳಿವಳಿಕೆ

ಆಲಿಸುವುದು, ಮಾತಾಡುವುದು, ಓದುವುದು, ಮತ್ತು ಬರೆಯುವುದು ಎಂಬ ನಾಲ್ಕು ಕೌಶಲಗಳು ಭಾಷೆಯ ಕಲಿಕೆಯಲ್ಲಿ ಸೇರಿವೆ ಎಂದು ಆಗಾಗ್ಗೆ ನಾವು ಹೇಳುತ್ತಿರುತ್ತೀವಿ. ಈ ಎಲ್ಲ ಕೌಶಲಗಳೂ ತಮ್ಮ ತಮ್ಮಲ್ಲೇ ಪರಸ್ಪರ ಸೇರಿಕೊಂಡಿರುವುದರ(=ಲಗತ್ತಾಗಿರುವುದರ) ಜೊತೆಜೊತೆಗೇ ತಿಳಿವಿನೊಂದಿಗೆ ಆಂತರ್ಯದಲ್ಲಿ ಸೇರಿಕೊಂಡಿವೆ(=ಲಗತ್ತಾಗಿವೆ) ಎಂಬ ಸಂಗತಿ ಭಾಷೆಯನ್ನು ಕುರಿತಂತೆ ಈ ಮುಂಚೆ ಓದಿರುವ ಎಲ್ಲ ಲೇಖನಗಳಲ್ಲಿ ಮತ್ತು ಈ ರೀಡರ್‌ನಲ್ಲಿರುವ ಲೇಖನಗಳಲ್ಲಿ ಸ್ಪಷ್ಟವಿದೆ. ಆಲಿಸುವುದರಲ್ಲಿ ಮತ್ತು ಮಾತನಾಡುವುದರಲ್ಲಿ ಒಬ್ಬ ವ್ಯಕ್ತಿಗೂ ಇನ್ನೊಬ್ಬ ವ್ಯಕ್ತಿಗೂ ಹಾಗೂ ವ್ಯಕ್ತಿಗಳ ಸಮೂಹದೊಂದಿಗೂ ಅಂತಃಕ್ರಿಯೆ ಅವಶ್ಯಕ ಮತ್ತು ಈ ಕಾರಣದಿಂದ ಪ್ರಾಯೋಜನೆ(ಆಯೋಜನೆ) ಮತ್ತು ವ್ಯಕ್ತಿಗಳ ನಡುವಿನ ಸಂಬಂಧ ಎಲ್ಲವೂ ಒಟ್ಟಾಗಿ ಸೇರಿಕೊಳ್ಳುತ್ತವೆ. ಜೊತೆಯಲ್ಲೇ ಆಲಿಸುವುದರಲ್ಲಿ ಮತ್ತು ಮಾತನಾಡುವುದರಲ್ಲಿ, ಮಾತನಾಡುವುದು ಏನನ್ನು, ಅಡಿದ್ದನ್ನು ಕೇಳಿಸಿಕೊಂಡು(ಆಲಿಸಿ) ತಿಳಿದುಕೊಳ್ಳುವುದು ಹೇಗೆ(ಅರ್ಥಮಾಡಿಕೊಳ್ಳುವುದು) ಇದು ಶಬ್ದಗಳಿಗೆ ಮಾತ್ರ ಸೀಮಿತವಾಗಿಲ್ಲ; ಯಾವ ಸಂದರ್ಭದಲ್ಲಿ ಆ ಮಾತನ್ನು ಆಡಲಾಗುತ್ತಿದೆಯೋ ಅಥವಾ ಹೇಳಲಾಗುತ್ತಿದೆಯೋ ಅದರೊಂದಿಗೆ ಲಗತ್ತಾಗಿದೆ, ಅಲ್ಲದೆ ಸಂದರ್ಭದ ಪರಿಚಯವಿಲ್ಲದೆ ಇದ್ದಾಗ ಸಂದರ್ಭದ ಪರಿಜ್ಞಾನ ಇಲ್ಲದೆ ಇದ್ದಾಗ ಸರಿಯಾದ ಮಾತನ್ನಾಡುವುದು ಬಹಳ ಕಷ್ಟ ಮತ್ತು ಆಲಿಸಿದ ಮಾತನ್ನು ಅರ್ಥಮಾಡಿಕೊಳ್ಳುವುದು(=ತಿಳಿದುಕೊಳ್ಳುವುದು) ಕೂಡ ಕಷ್ಟ.

ಇದೇ ರೀತಿ ಓದುವುದು ಮತ್ತು ಬರೆಯುವುದು ಎರಡಕ್ಕೂ ಅಂತರಂಗ ಸಂಬಂಧವಿದೆ. ಒಂದು ಹಂತದಲ್ಲಿ ಮಾತನಾಡುವುದು ಮತ್ತು ಬರೆಯುವುದಕ್ಕೆ ಸಂಬಂಧವಿದೆ. ಹಾಗೂ ಆಲಿಸುವುದು ಮತ್ತು ಓದುವುದಕ್ಕೂ

ಸಂಬಂಧವಿದೆ. ಇವೆಲ್ಲವುಗಳಲ್ಲಿ ಇರುವ ಒಂದು ಮೂಲ ವಿಷಯವೆಂದರೆ ಅರ್ಥಮಾಡಿಕೊಳ್ಳುವುದು(=ತಿಳಿದುಕೊಳ್ಳುವುದು). ತಿಳಿದುಕೊಳ್ಳುವುದಕ್ಕೆ ಬೇಕಾಗಿರುವುದು ನಿಮ್ಮ ಕಣ್ಣ ಮುಂದಿರುವ ಪೂರಾ ಟೆಕ್ಸ್ಟ (=ಪಠ್ಯ) ಏನಿದೆ ಅದರ ಅರ್ಥ ಏನೆಂಬುದನ್ನು. ಆ ಟೆಕ್ಸ್ಟ(=ಪಠ್ಯ) ಮೌಖಿಕ ರೂಪದ್ದಾಗಿರಬಹುದು ಅಥವಾ ಲಿಖಿತ ರೂಪದ್ದಾಗಿರಬಹುದು. ಇದಕ್ಕೆ ಅದರಲ್ಲಿರುವ ವಾಕ್ಯಗಳ ನಡುವಣ ಸಂಬಂಧ ಯಾವ ರೀತಿಯದು, ಅದರಲ್ಲಿ ಹೇಳಲಾಗಿರುವ ಮಾತುಗಳ(=ಸಂಗತಿಗಳ) ನಡುವಣ ಸಂಬಂಧ ಯಾವ ರೀತಿಯದು ಹಾಗೂ ಯಾವ ಸಂದರ್ಭದಲ್ಲಿ ಅದನ್ನು ಹೇಳಲಾಗಿದೆ ಅಲ್ಲದೆ, ಆ ಸಂದರ್ಭದಲ್ಲಿ ಅದರ ಅರ್ಥ ಏನು ಇದೆಲ್ಲವನ್ನೂ ತಿಳಿದುಕೊಳ್ಳಬೇಕಾಗುತ್ತದೆ. ಇದರ ನಂತರ ನಿಮ್ಮ ಪೂರ್ತಿ ಜ್ಞಾನದ

ಆಧಾರದ ಮೇಲೆ. ನಿಮ್ಮ ಪೂರ್ತಿ ಪರಿಸ್ಥಿತಿಯ ಆಧಾರದ ಮೇಲೆ, ಒಂದು ಅಭಿಪ್ರಾಯವನ್ನು ರೂಪಿಸಿಕೊಳ್ಳುವುದು ಇವೆರಡೂ ಸೇರಿವೆ. ಇದೇ ರೀತಿ ಮಾತಾಡುವುದಕ್ಕೂ ಮತ್ತು ಬರೆಯುವುದಕ್ಕೂ ಗಾಢವಾದ ಸಂಬಂಧವಿದೆ. ಕಾರಣ ಓದುವುದು ಮತ್ತು ಬರೆಯುವುದು ಹಾಗೂ ಆಲಿಸುವುದು ಮತ್ತು ಆಡುವುದು(ಮಾತಾಡುವುದು) ಇವೆರಡರಲ್ಲಿಯೂ ನೀವು ಸಂದರ್ಭವನ್ನು ತಿಳಿದುಕೊಳ್ಳಬೇಕಾಗುತ್ತದೆ ಮತ್ತು ನಿಮ್ಮ ಅಭಿವ್ಯಕ್ತಿಯ ಪ್ರಯೋಜನ ಮತ್ತು ಅದು ಯಾರಿಗಾಗಿ ಇದೆ ಎಂಬುದನ್ನೂ ತಿಳಿದುಕೊಳ್ಳಬೇಕಾಗುತ್ತದೆ. ಅಂದಮೇಲೆ ಎರಡರಲ್ಲೂ ಆಲಿಸುವವನ ಓದುವವನ ತಿಳಿವಳಿಕೆ ಮತ್ತು ಯಾವ ಸಂದರ್ಭದಲ್ಲಿ ಅವರು ಅಭಿವ್ಯಕ್ತಿಸುತ್ತಿದ್ದಾರೆ ಆ ಸಂಬಂಧದ ಪ್ರಯತ್ನ ಕೂಡ ಸೇರಿದೆ. ಅಂದರೆ ಅಭಿವ್ಯಕ್ತಿ ಮತ್ತು ತಿಳಿವಳಿಕೆಯ ಎಲ್ಲ ಮಾಧ್ಯಮಗಳೂ ಪ್ರಯೋಜನದ ಉದ್ದೇಶ ಮತ್ತು ಸಂದರ್ಭದಿಂದ ನಿರ್ಧರಿಸಲ್ಪಡದಿದ್ದರೂ ಸರಿಯೆ, ಆದರೆ ಪ್ರಭಾವಿಸಲ್ಪಡುವುದಂತೂ ನಿಜ. ಇದರ ಒಂದು ನಿಹಿತಾರ್ಥವಂತೂ ಈ ದೃಷ್ಟಿಯಿಂದ ಯೋಚಿಸಿದಾಗ ಭಾಷಾ ಶಿಕ್ಷಣದ ಪರಿಪ್ರೇಕ್ಷ್ಯವು(ಕಣ್ಣೆಲೆ) ಮನುಷ್ಯರ ಮತ್ತು ಭಾಷೆಯ ಸಂಬಂಧಗಳನ್ನು ಗಮನವಿಟ್ಟು ಅರ್ಥಮಾಡಿಕೊಂಡು ಪ್ರೈಮರೀ ಹಂತದಲ್ಲಿ ಮಾತಾಡುವ ಸಾಮರ್ಥ್ಯದ ಮುಂದಿನ ಬೆಳವಣಿಗೆ ಹೇಗೆ ಆಗಬಹುದೆಂಬುದರ ಕುರಿತು ಚರ್ಚೆಯಾಗಬೇಕೆಂದು ಬಯಸುತ್ತದೆ.(ಹಕ್ಕೊತ್ತಾಯ ಮಾಡುತ್ತದೆ). ಕಾರಣ ಮಾತಾಡುವ ಸಾಮರ್ಥ್ಯದ ಬೆಳವಣಿಗೆಯಾಗಬೇಕೆಂದರೆ, ಆಲಿಸುವ ಸಾಮರ್ಥ್ಯದ ಬೆಳವಣಿಗೆ, ಆಲಿಸುವವರ ತಿಳಿವಳಿಕೆಯ ಸಾಮರ್ಥ್ಯದ ಬೆಳವಣಿಗೆ ಮತ್ತು ಬಾಲಕನ ಮಿದುಳಿನಲ್ಲಿ ಇರುವ ವಿಚಾರಗಳ ಜಾಲದ ಬೆಳವಣಿಗೆ ಇತ್ಯಾದಿಗಳೆಲ್ಲದನ್ನು ಗಮನಿಸುವುದು ಅವಶ್ಯಕವಾಗುತ್ತದೆ. ಹಾಗಾದಾಗಲೇ ನಾವು ಬಾಲಕನಲ್ಲಿ ಮಾತಾಡುವ ಬೆಳವಣಿಗೆಯಾಗಿದೆ ಎಂದು ಹೇಳಲು ಸಾಧ್ಯ. ಉದಾಹರಣೆಗೆ ನಾವು ಒಂದನೇ ತರಗತಿಯ ಮಗುವಿಗೆ (ಬಾಲಕನಿಗೆ) ಯಾವುದಾದರೊಂದು ಮರದ ಬಗ್ಗೆ ಏನಾದರೂ ಹೇಳೆಂದು ಕೇಳಿದಾಗ ಇಲ್ಲವೆ ನಿನ್ನೆ ಏನಾಯಿತು ಎಂಬ ಬಗ್ಗೆ ಹೇಳಲು ಕೇಳಿದಾಗ ಅವನು ಸ್ವಲ್ಪ ಸಂಗತಿಗಳನ್ನು ಹೇಳಬಲ್ಲ. ಇದೇ ಪ್ರಶ್ನೆಯನ್ನು ನಾವು ಮೂರನೇ ತರಗತಿಯ ಬಾಲಕನಿಗೆ(ಮಗುವಿಗೆ) ಕೇಳಿದಾಗ ಅವನು ಒಂದನೇ ತರಗತಿಯ ಬಾಲಕನಿಗಿಂತ ಹೆಚ್ಚು ಸಂಗತಿಗಳನ್ನು(ಮಾತುಗಳನ್ನು) ಹೇಳಬಲ್ಲ. ಬೇರೆ ಬೇರೆ ಅನುಭವ ಕ್ಷೇತ್ರದ ಮಕ್ಕಳು ಬೇರೆ ಬೆರೆ ಸಂಗತಿಗಳನ್ನು ಹೇಳುವರು. ಯಾವುದೇ ಸಂದರ್ಭದಲ್ಲಿ ಮಾತಾಡಲು ಪ್ರಾರಂಭಿಸುವುದಕ್ಕೆ ಮುಂಚೆ ನಿಮ್ಮಲ್ಲಿ ಒಂದು ಟೆಕ್ಸ್ಟ ಅನ್ನು (=ಪಠ್ಯವನ್ನು) ನಿರ್ಮಿಸುವ ಸಾಮರ್ಥ್ಯವಿರಬೇಕು, ನೀವು ಆ ಪಠ್ಯದ ಬಗ್ಗೆ ಯೋಚಿಸಿ ಅದನ್ನು ವ್ಯವಸ್ಥಿತಗೊಳಿಸಬಲ್ಲವರಾಗಿರಬೇಕು ಮತ್ತು ಈ ಕೆಲಸವನ್ನು ಮಾತಾಡುತ್ತ-ಮಾತಾಡುತ್ತಲೇ ಮಾಡುವ ಸಾಮರ್ಥ್ಯ ಹೊಂದಿರಬೇಕಾದ್ದು ಅಗತ್ಯ. ಆದ್ದರಿಂದ ಪ್ರಾಥಮಿಕ ತರಗತಿಯಲ್ಲಿ ತಿಳಿದುಕೊಳ್ಳುವ ಮತ್ತು ಅಭಿವ್ಯಕ್ತಿಯ ಮೇಲೆ ಫೋಕಸ್(ಕೇಂದ್ರೀಕರಿಸುವುದರ) ಮಾಡುವುದರ ಬಗ್ಗೆ ಮಾತಾಡಿದರೆ ಇದರ ಅಡಿಯಲ್ಲಿ ಬೇರೆ ಬೇರೆ ತರಗತಿಗಳಲ್ಲಿ ಯಾವ ಯಾವ ರೀತಿಯ ಅವಕಾಶಗಳು ಮಕ್ಕಳಿಗೆ ಸಿಗಬೇಕೆಂಬುದನ್ನು ಮತ್ತು ಆ ಅವಕಾಶಗಳಲ್ಲಿ, ಅರ್ಥಮಾಡಿಕೊಳ್ಳುವ ಮತ್ತು ಅಭಿವ್ಯಕ್ತಿಸುವ ಸಾಮರ್ಥ್ಯದ ಬೆಳವಣಿಗೆ ಮಕ್ಕಳಲ್ಲಿ ಆಗಲು ಹಂತಹಂತವಾಗಿ ಅಗತ್ಯವಾದ

ಜಟಿಲತೆಯನ್ನು(ಕ್ಲಿಷ್ಟತೆಯನ್ನು) ಹೇಗೆ ಸೇರಿಸಬಹುದೆಂಬುದರ ಬಗ್ಗೆ ಯೋಚಿಸಬೇಕಾಗುತ್ತದೆ.

ಒಂದು ವೇಳೆ ಇದು ಬಾಲಕನ (ಮಗುವಿನ) ಭಾಷೆಯ ಜೊತೆಯಲ್ಲಿ ಆದರೆ, ಮತ್ತು ಅದರಲ್ಲಿ ಶಾಲೆಯ ಭಾಷೆಯೂ ಸೇರಿದಂತೆ ಇನ್ನಷ್ಟು ಭಾಷೆಗಳೂ ಸೇರಿದ್ದರೆ, ಬಾಲಕನ ಬೆಳವಣಿಗೆಯೂ ಹೆಚ್ಚಾಗುತ್ತದೆ ಮತ್ತು ಅವನ ಅಭಿವ್ಯಕ್ತಿ ಮತ್ತು ಅರ್ಥಮಾಡಿಕೊಳ್ಳುವ(ತಿಳಿದುಕೊಳ್ಳುವ) ಎರಡೂ ಸಾಮರ್ಥ್ಯಗಳು ಒಟ್ಟೊಟ್ಟಿಗೇ ವಿಕಾಸಹೊಂದುತ್ತವೆಯಲ್ಲವೆ ಎಂಬ ವಿಚಾರವನ್ನೂ(ಸಂಗತಿಯನ್ನೂ) ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಆಲಿಸುವುದು, ಮಾತನಾಡುವುದು, ಬರೆಯುವುದು ಮತ್ತು ಓದುವುದು ಇವು ಒಂದು ಕ್ರಮದಲ್ಲಿ ನಡೆಯುತ್ತವೆ, ಮೊದಲು ಬಾಲಕ ಗ್ರಹಿಸುತ್ತಾನೆ, ಅದರ ನಂತರ ಅವನು ಉತ್ಪಾದಿಸುತ್ತಾನೆ ಎಂದು ಹೆಚ್ಚಾಗಿ ಹೇಳಲಾಗುತ್ತದೆ. ಇದರ ಅರ್ಥ ಮೊದಲಿಗೆ ಅವನು ಆಲಿಸುತ್ತಾನೆ, ಆಮೇಲೆ ಮಾತಾಡುತ್ತಾನೆ ಮತ್ತು ಮೊದಲಿಗೆ ಅವನು ಓದುತ್ತಾನೆ ಅನಂತರ ಬರೆಯುತ್ತಾನೆ. ಆದರೆ ಇದು ಸರಿಯಲ್ಲ. ಮೇಲೆ ಹೇಳಿದಂತೆ ಆಲಿಸುವುದು ಮತ್ತು ಮಾತನಾಡುವುದು ಜೊತೆ ಜೊತೆಯಲ್ಲೇ ನಡೆಯಲು ಸಾಧ್ಯ. ಕಾರಣ ಮಾತನಾಡುವವನೊಂದಿಗೆ ಆಲಿಸುವವನಿಗೆ ಏನಾದರೂ ಸಂಬಂಧವಿದ್ದಾಗ ಮಾತ್ರವೇ ಆಲಿಸುವವನಿಗೆ ಆಲಿಸುವುದರ ಪ್ರಯೋಜನ ಉಂಟಾಗುವುದು. ಅಲ್ಲದೆ ಅವನೂ ಆಲಿಸುವವನ ಮಾತನ್ನು ಅರ್ಥಮಾಡಿಕೊಂಡರೆ ಮತ್ತು ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡಿದರೆ ಮಾತ್ರ ಸಂಬಂಧ ಸಾಧ್ಯವಾಗುತ್ತದೆ. ಮನೆಗಳಲ್ಲೂ ಸಹ ಚಿಕ್ಕ ಮಕ್ಕಳು ಮಾತುಕತೆ ನಡೆಸಿದಾಗ ದೊಡ್ಡವರು ಅವರ ಮಾತುಗಳನ್ನು ಅರ್ಥಮಾಡಿಕೊಳ್ಳಲು ತುಂಬ ಪ್ರಯತ್ನಿಸುತ್ತಾರೆ. ಅರ್ಥ ಮಾಡಿಕೊಳ್ಳುವ ಆ ಪ್ರಯತ್ನದಿಂದಾಗಿಯೇ ತಾನೂ ಅವರ ಮಾತುಗಳನ್ನು ಅರ್ಥಮಾಡಿಕೊಳ್ಳುವ ಅಗತ್ಯವಿದೆಯೆಂದು ಮತ್ತು ತನ್ನ ಮಾತುಗಳನ್ನು ಇನ್ನಷ್ಟು ಚೆನ್ನಾದ ರೀತಿಯಲ್ಲಿ ಆಡಿ ತಿಳಿಸಬೇಕೆಂದು ಅವನಿಗೆ ಅನಿಸುತ್ತದೆ. ಇದರ ಅರ್ಥ ಮಾತಾಡುವುದು ಶಬ್ದಗಳಲ್ಲಿ ಮಾತ್ರ ಇರುವುದಿಲ್ಲ, ಮಾತನಾಡುವುದು ಅನೇಕ ಸಂದರ್ಭಗಳಲ್ಲಿ ಅನೇಕ ರೀತಿಯಲ್ಲಿ ಆಗಬಹುದು. ಈ ಅವಕಾಶಗಳಲ್ಲಿ ಆ ಪರಿಸ್ಥಿತಿಗೆ ತಕ್ಕಂತೆ ಮತ್ತು ಆಲಿಸುವವನಿಗೆ ತಕ್ಕಂತೆ ಮಾತನ್ನು ಆಡಬೇಕಾಗುತ್ತದೆ. ಅದರಲ್ಲಿ ಚಹರೆಯ ಹಾವಭಾವಗಳು, ಶರೀರದ ಅಂಗಗಳ ಬಳಕೆ, ಶಬ್ದಗಳ ಆಯ್ಕೆ, ಎಷ್ಟು ವಿಸ್ತರಿಸಬೇಕು, ಇದೆಲ್ಲವನ್ನೂ ಯೋಚಿಸಬೇಕಾಗುತ್ತದೆ. ತೀರಾ ಹತ್ತಿರದ ವ್ಯಕ್ತಿ, ತಂದೆ, ತಾಯಿ, ಸ್ನೇಹಿತರು ಇವರಿಗೆಲ್ಲ ಒಂದು ಶಬ್ದ ಅಥವಾ ಒಂದು ಸಂಕೇತದ(ಚಿಹ್ನೆ) ಬಳಕೆ ಸಾಕಾಗುತ್ತದೆ. ಹೊರಗಿನ ವ್ಯಕ್ತಿಗಳಿಗೆ ಕಡಿಮೆ ಶಬ್ದಗಳಲ್ಲಿ ಇಲ್ಲವೆ ಪ್ರಕಟವಾದ ವಸ್ತುಗಳ, ಕಡೆಗೆ ಸನ್ನೆ ಮಾಡಬೇಕಾಗುತ್ತದೆ. ಅಭಿವ್ಯಕ್ತಿಯ ಎಲ್ಲಕ್ಕಿಂತ ಮೊದಲ ಮಾಧ್ಯಮ ಭಾವ, ಸಂಕೇತ, ಶರೀರದ ಬಳಕೆ ಇವು. ಮತ್ತು ಇವೆಲ್ಲವೂ ಅಭಿವ್ಯಕಿಯ ಮಾಧ್ಯಮಗಳು. ಅದನ್ನು ಗಮನದಲ್ಲಿಟ್ಟುಕೊಂಡು ಮಗುವಿನ ಸಲುವಾಗಿ(ಬಾಲಕನ ಸಲುವಾಗಿ) ಮಾತನಾಡುವ ಅಭ್ಯಾಸಗಳ ಯೋಜನೆಯನ್ನು ನಾವು ಮಾಡಬೇಕಾಗುತ್ತದೆ. ಜೊತೆಗೆ ಮಾತನಾಡುವುದು

ಮತ್ತು ಆಲಿಸುವುದು ಎರಡೂ ತಿಳಿಯುವುದರ (ಅರ್ಥಮಾಡಿಕೊಳ್ಳುವುದರ) ಜೊತೆ ಜೊತೆಗೇ ಸಾಗುತ್ತವೆ ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು. ಬರೆಯುವುದರಲ್ಲೂ ಹೆಚ್ಚುಕಡಿಮೆ ಹೀಗೆಯೇ. ಓದುವುದು ಮತ್ತು ಬರೆಯುವುದನ್ನು ಕಲಿಯುವುದರಲ್ಲಿ ಆಳದವರೆಗೆ ಆಂತರಂಗಿಕವಾಗಿ ಸಂಬಂಧಿಸಿವೆ. ಒಟ್ಟಾರೆಯಾಗಿ ಭಾಷೆಯನ್ನು ಕಲಿಸುವಲ್ಲಿ ಈ ಎಲ್ಲ ಮಗ್ಗುಲುಗಳನ್ನು ನೆನಪಿನಲ್ಲಿಟ್ಟುಕೊಳ್ಳಬೇಕೆಂಬುದರ ಅರ್ಥ, ಹಾವಭಾವ ಮತ್ತು ಚಿತ್ರಗಳನ್ನು ಬರೆಯುವುದು ಸೇರಿರುವ ಬೇರೆ ಬೇರೆ ಪ್ರಕಾರಗಳ ಟಾಸ್ಕ್‌ನಲ್ಲಿ ಪಾಲ್ಗೊಳ್ಳುವವರಿಗೆ ಅವಕಾಶವನ್ನು ನಿರ್ಮಿಸುವುದು ಎಂದು.

ಮಾತನಾಡುವ ಮತ್ತು ಅಲಿಸುವ ಯಾವ ರೀತಿಯ ಅವಕಾಶಗಳು ಬಾಲಕನಿಗೆ(ಮಗುವಿಗೆ) ಸಿಗಬೇಕು?

ಬಾಲಕನು ಹತ್ತಿರದ ಸಂಗತಿ(=ವಿಷಯ) ಯಿಂದ ದೂರದ ಸಂಗತಿಯವರೆಗೆ ತಲುಪುತ್ತಾನೆ ಎಂದು ತಿಳಿಯಲಾಗಿದೆ. ಹಾಗಾಗಿ ಮೊದಲು ಬಾಲಕನ ಹತ್ತಿರದ ಸಂಗತಿಗಳನ್ನು(=ವಿಷಯಗಳನ್ನು) ಕುರಿತು ಮಾತನಾಡುವುದು ನಮ್ಮ ಪ್ರಯತ್ನವಾಗಬೇಕು. ನಮಗೆಲ್ಲರಿಗೂ ಕಥೆಗಳು ತುಂಬ ಹಿಡಿಸುತ್ತವೆ ಎಂದು ಗೊತ್ತು. ಆ ಕಥೆಗಳಲ್ಲಿ ಕೆಲವು ನಮ್ಮ ಅನುಭವ ಕ್ಷೇತ್ರದ ಹೊರಗಿನವಾಗಿದ್ದು ನಮ್ಮ ಕಲ್ಪನೆಯನ್ನು ಪ್ರಚೋದಿಸುವಂಥವಾಗಿದ್ದರೆ ಅಂಥವನ್ನು ಆಲಿಸುವುದರಲ್ಲಿ, ಅವುಗಳೊಂದಿಗೆ ಹೋರಾಡುವುದರಲ್ಲಿ, ಅವುಗಳನ್ನು ಅರ್ಥಮಾಡಿಕೊಳ್ಳಲೆತ್ನಿಸುವುದರಲ್ಲಿ ನಮಗೆ ಬಹಳ ಸಂತೋಷ ಸಿಗುತ್ತದೆ. ಮಗುವಿಗೆ ಕೊಟ್ಟಿರುವ ಪಠ್ಯವೇನಿದೆ, ಯಾವ ಪಠ್ಯವನ್ನು ಅವನು ಆಲಿಸುತ್ತಿದ್ದಾನೆ ಅದರಲ್ಲಿ ಕಲ್ಪನೆ ಇರಲಿ, ಅದ್ಭುತ ರಮ್ಯತೆ(ಈಚಿಟಿಣಚಿಥಿ) ಕೂಡ ಇರಲಿ. ಇದರಿಂದ ಅವನು ಹೊಸ ವಸ್ತುವನ್ನು ಕಲ್ಪಿಸಿಕೊಳ್ಳುವ ಹಂತಕ್ಕೆ ತನ್ನ ಬುದ್ಧಿಯನ್ನು ಕೊಂಡೊಯ್ಯುವ ಹಾಗೂ ಅದರ ಬಗ್ಗೆ ಏನನ್ನಾದರೂ ಸ್ವಲ್ಪ ಹೇಳುವ ಸಾಮರ್ಥ್ಯವನ್ನು ವೃದ್ಧಿಸಿಕೊಳ್ಳುವುದು ಸಾಧ್ಯವಾಗುತ್ತದೆ. ಇಂಥ ಪಠ್ಯಗಳು ಇರುವಂತೆ ನೋಡಿಕೊಳ್ಳುವುದು ಪ್ರಾರಂಭದಿಂದಲೇ ನಮ್ಮ ಪ್ರಯತ್ನವಾಗಬೇಕು ಎಂಬುದನ್ನಷ್ಟು ಅರ್ಥಮಾಡಿಕೊಳ್ಳಬೇಕು. ಅವನಲ್ಲಿ ಮನೆಮಾಡಿರುವ ಅದ್ಭುತ ರಮ್ಯತೆ(ಈಚಿಟಿಣಚಿಥಿ) ಮತ್ತು ಕಲ್ಪನೆಗಳಲ್ಲಿ ಎಂಥವು ಕೆಲವೊಂದು ಹಂತದವರೆಗೆ ಅವನ ಜೀವನದೊಂದಿಗೆ ಹೊಂದಿಕೊಳ್ಳುತ್ತವೆ ಮತ್ತು ಹೊಂದಿಕೊಳ್ಳುವುದಿಲ್ಲ ಎಂಬಂಥ ವಸ್ತು ಮತ್ತು ವಿಚಾರಗಳ ಬಗ್ಗೆ ಯೋಚಿಸುವುದು ಮತ್ತು ವಿಚಾರ ಮಾಡುವುದು ಅವನ ಮಾನಸಿಕ ಬೆಳವಣಿಗೆಗೆ ಅವಶ್ಯಕ. ಯಾವ ಕಥೆಗಳಲ್ಲಿ ಪುನರಾವರ್ತನೆ ಇರುತ್ತದೆಯೋ ಮತ್ತು ಮುಂದೆ ಏನಾಗುತ್ತದೆಯೋ ಎಂಬುದನ್ನು ಕುತೂಹಲದಿಂದ ನಿರೀಕ್ಷೆ ಮಾಡುವಂಥ ಅವಕಾಶಗಳು(=ಸಂದರ್ಭಗಳು) ಇರುತ್ತವೆಯೋ ಅಂಥ ಕಥೆಗಳು ನಮ್ಮೆಲ್ಲರಿಗೂ ಬಾಲ್ಯದಿಂದಲೇ ಇಷ್ಟವಾಗುತ್ತವೆ. ಆ ಕಥೆ, ಅದನ್ನು ಆಲಿಸುವುದು, ನಿಧ ನಿಧಾನವಾಗಿ ಆ ಕಥೆಯನ್ನು ನೆನಪಿಸಿಕೊಳ್ಳುವುದು ಮತ್ತು ಅದನ್ನು ಅರ್ಥಮಾಡಿಕೊಳ್ಳುವುದು ಅವನಿಗೆ ಹಿಡಿಸುತ್ತದೆ. ಅಂದ ಮೇಲೆ ಕಥೆಗಳನ್ನು ಕವಿತೆಗಳನ್ನು ಅವು, ಮಗುವಿಗೆ ಹತ್ತಿರದ್ದೆನಿಸುವಂಥ, ಅವನಲ್ಲಿ ಆಸಕ್ತಿ ಹುಟ್ಟಿಸುವಂಥ, ಅವನ

ಕಲ್ಪನೆಯನ್ನು ಬೆಳೆಸುವಂಥ ಮತ್ತು ಅವನು ಸೃಷ್ಟಿಸುವುದನ್ನು ಸಾಧ್ಯಮಾಡುವಂಥ ಕಥೆಗಳಾಗಿರಬೇಕೆಂಬುದನ್ನು ದೃಷ್ಟಿಯಲ್ಲಿಟ್ಟುಕೊಂಡು ಆಯ್ಕೆ ಮಾಡಬೇಕು. ಆಲಿಸುವುದು ಮತ್ತು ಮಾತನಾಡುವುದು, ಎರಡೂ ವಿಚಾರದ ಬೆಳವಣಿಗೆ ಮತ್ತು ಬುದ್ಧಿಯ ಬೆಳವಣಿಗೆಯೊಂದಿಗೆ ಲಗತ್ತಾಗಿವೆ. ಮಗುವನ್ನು ಹಲವು ಹಂತಗಳಲ್ಲಿ ಪ್ರಚೋದಿಸುವಂಥ ಸಾಮಗ್ರಿಗಳನ್ನು ನಾವು ಆಯ್ಕೆಮಾಡಿಕೊಳ್ಳಬೇಕು. ಮಗುವು ದಿನನಿತ್ಯವೂ ನೋಡುತ್ತಿರುವಂಥ ವಸ್ತುವಿನ ಕುರಿತಂತೆ, ಅಥವಾ ನೇರವಾದ ಸಾಮಾನ್ಯವಾದ ವಿವರಣೆ, ಘಟನಾ ಕ್ರಮದ ವಿವರಣೆಯಂಥದು ಆಗಿರಬಾರದು. ಆದರೆ ಅವನಿಗೆ ಸ್ವಲ್ಪ ಮಟ್ಟಿನ ಆವೇಶ ಉಕ್ಕಿಸುವಂಥ, ಹೊಸದಾಗಿ ಏನನ್ನಾದರೂ ಯೋಚಿಸಲು ಸಿಗುವಂಥ, ತನ್ನದೇನನ್ನಾದರೂ ಮಾಡಲು ಸಿಗುವಂಥ, ಈ ಎಲ್ಲವಸ್ತುಗಳನ್ನೂ ಸೇರಿಸಿ ಕೆಲವೊಂದು ಹೊಸ ವಸ್ತುಗಳನ್ನು ಮಾಡಬಹುದಾದಂಥ, ಅದನ್ನು ತಯಾರಿಸಬಹುದಾದಂಥ, ಅದನ್ನು ವ್ಯಕ್ತಪಡಿಸಬಹುದಾದಂಥದು ಆಗಿರಬೇಕು. ಆಲಿಸುವ ಹಾಗೂ ಮಾತನಾಡುವುದರ ಬಗ್ಗೆ ಹೇಳಬೇಕೆಂದರೆ ಮಕ್ಕಳು ಒಟ್ಟುಗೂಡಿ ಕಥೇಗಳನ್ನು ರಚಿಸುವಂಥ, ಅಥವಾ ಕೆಲವು ಪಾತ್ರಗಳನ್ನು ಅಭಿನಯಿಸಿ ತೋರಿಸುವಂಥ ಪ್ರಯತ್ನಗಳು ಇರಲಿ. ಅಥವಾ ಈ ಪಾತ್ರಗಳು ಹೇಗೆ ಆಗುತ್ತವೆ ಎಂದು ಕಲ್ಪಿಸಿಕೊಳ್ಳುವಂಥ, ಇಲ್ಲವೆ ಅವುಗಳ ವೇಷ ಭೂಷಣಗಳ ಬಗ್ಗೆ ಯೋಚಿಸಲು ಅವಕಾಶವಿರುವಂಥ ಪ್ರಯತ್ನಗಳಿರಲಿ. ಇಂಥ ಕಲ್ಪನೆಗಳು ಏನಿವೆ ಮತ್ತು ಜನರ ವ್ಯವಹಾರಗಳ ಆಧಾರದ ಮೇಲೆ ಹೊಸ ಸೃಷ್ಟಿಗಳನ್ನು ಮಾಡುವಂಥ ಪ್ರಯತ್ನಗಳು ಏನಿವೆ ಅವುಗಳಿಂದ ಮಗುವಿಗೆ ಹೊಸ ಪಠ್ಯವನ್ನು ಆಲಿಸಿ ಅರ್ಥಮಾಡಿಕೊಳ್ಳುವುದರಲ್ಲಿ ನೆರವು ದೊರೆಯುತ್ತದೆ.

ಮಾತನಾಡುವ ಸಾಮರ್ಥ್ಯದ ಬೆಳವಣಿಗೆ ನಿಲ್ಲುವಂಥದಲ್ಲ ಎಂಬುದು ಗಮನದಲ್ಲಿಟ್ಟುಕೊಳ್ಳಬೇಕಾದ ಸಂಗತಿ. ಆಲಿಸುವ ಮತ್ತು ಮಾತನಾಡುವ ಸಾಮರ್ಥ್ಯದ ಬೆಳವಣಿಗೆ ಓದುವ ಸಾಮರ್ಥ್ಯದ ಜೊತೆ ಜೊತೆಯಲ್ಲೇ ವೃದ್ಧಿಸುತ್ತದೆ. ಕಾರಣ, ಜ್ಞಾನ ಮತ್ತು ತಿಳಿವಳಿಕೆಯ ಬೆಳವಣಿಗೆಯೊಂದಿಗೆ ಏನೇನನ್ನು ತಿಳಿದುಕೊಳ್ಳಬಹುದಾಗಿದೆಯೋ ಅದೂ ವೃದ್ಧಿಸುತ್ತದೆ. ಆಲಿಸುವುದರಲ್ಲಿ ತಿಳಿದುಕೊಳ್ಳುವುದು ಸೇರಿದೆ. ಮತ್ತು ಈ ಮೊದಲೇ ಮಾಡಲಾಗಿರುವ ನಿರ್ಧಾರಗಳು ತಿಳಿದುಕೊಳ್ಳುವುದಕ್ಕೆ ನೆರವಾಗುತ್ತವೆ. ಆಲಿಸುವುದು ಮತ್ತು ಮಾತನಾಡುವುದು ವಿಶೇಷ ಕ್ರಮದಲ್ಲಿ ಇರುವುದಿಲ್ಲ. ಆದರೆ ಅವು ಒಂದಕ್ಕೊಂದು ಲಗತ್ತಾಗಿವೆ(ಸೇರಿಕೊಂಡಿವೆ) ಮತ್ತು ಜೊತೆ ಜೊತೆಯಲ್ಲಿ ಸಾಗುತ್ತವೆ. ಮಾತನಾಡುವುದು ಮತ್ತು ಓದುವುದು ಕೂಡ ಒಂದು ವಿಶೇಷ ಕ್ರಮದಲ್ಲಿರುವುದಿಲ್ಲ. ಇವೆಲ್ಲದರ ಕೇಂದ್ರದಲ್ಲಿ ಸಂವಾದ ಮತ್ತು ತಿಳಿವಳಿಕೆ ಇದೆ. ಪ್ರಾರಂಭದಲ್ಲಿ ಚಿಕ್ಕ ಮಕ್ಕಳ ಮಾತಿನ ಅರ್ಥವನ್ನು ಶಬ್ದಗಳ ಬಳಕೆಯಲ್ಲಿ ಕಾಣಲಾಗುವುದಿಲ್ಲ ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು. ಪ್ರಾರಂಭದಿಳದಲೇ ಮಗು ತನ್ನ ಮಾತನ್ನು ಹೇಳಲು ಬೇರೆ ಬೇರೆ ಧ್ವನಿಗಳು ಮತ್ತು ಸನ್ನೆಗಳ(ಸಂಕೇತಗಳ) ಬಳಕೆ ಮಾಡುತ್ತಿರುತ್ತದೆ. ಮತ್ತು ಸುತ್ತುಮುತ್ತಿನ ಜನರ ಮಾತನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡುತ್ತಿರುತ್ತದೆ. ಓದುವುದನ್ನು ಆರಂಭಿಸಿದ ಮೇಲೆ ಓದಿ

ಅರ್ಥ ಮಾಡಿಕೊಂಡ ಸಂಗತಿಗಳು(ವಿಷಯಗಳು), ಶಬ್ದಗಳು ಮತ್ತು ನಿಶ್ಚಯಗಳು(ನಿರ್ಧಾರಗಳು) ನಮ್ಮ ಮೌಖಿಕ ಅಭಿವ್ಯಕ್ತಿಯನ್ನೂ ಸಮೃದ್ಧಗೊಳಿಸುತ್ತವೆ. ಈ ಮಾತಿನ ತಾತ್ಪರ್ಯ ಓದುವುದನ್ನು ಕಲಿತ ಬಳಿಕ ನಿಮ್ಮ ಮಾತನಾಡುವ ಸಾಮರ್ಥ್ಯದಲ್ಲೂ ಬೆಳವಣಿಗೆಯಾಗುತ್ತದೆ. ಮಾತನಾಡುವ ಸಾಮರ್ಥ್ಯದ ಬೆಳವಣಿಗೆಯಿಂದ ನಿಮ್ಮ ಓದುವ ಸಾಮರ್ಥ್ಯದಲ್ಲೂ ಬೆಳವಣಿಗೆಯಾಗುತ್ತದೆ ಮತ್ತು ಬರೆಯುದರ ಕುರಿತೂ ಇದೇ ಆಗುತ್ತದೆ. ಆದ್ದರಿಂದ ಈ ನಾಲ್ಕೂ ಸಾಮರ್ಥ್ಯಗಳನ್ನು ಅವುಗಳಲ್ಲಿಯ ಅಂತರ್ ಸಂಬಂಧಗಳನ್ನು ಗುರುತಿಸಿ ಕಲಿಯುವ ಅವಕಾಶಗಳನ್ನು ನಿರ್ಮಿಸುವುದು ಇಲ್ಲವೆ ಸ್ವಾಭಾವಿಕವಾದ ರೀತಿಯಲ್ಲಿ ಇವುಗಳ ಅವಕಾಶಗಳು ದೊರೆಯುತ್ತ ಹೋಗುವುದು ಭಾಷೆಯ ಕಲಿಕೆಗೆ ಅಗತ್ಯ. ಯಾವ ಮಗು(ಬಾಲಕ) ಯಾವ ರೀತಿಯಲ್ಲಿ ಯಾವ ಸಂಗತಿಗಳನ್ನು ಆಲಿಸಿದ್ದಾನೋ ಅಥವಾ ಓದಿದ್ದಾನೋ ಅವುಗಳ ಆಧಾರದ ಮೇಲೆ ಯಾವ ರೀತಿಯ ಮಾತನಾಡುವ ಮತ್ತು ಬರೆಯುವ ಅಭ್ಯಾಸಗಳು ಸ್ವಾಭಾವಿಕ ರೂಪದಲ್ಲಿ ಆಗಬಲ್ಲುವು ಎಂಬುದನ್ನು ಕುರಿತು ಯೋಚಿಸಬೇಕಿದೆ. ಇಂಥ ಅವಕಾಶಗಳು ಪ್ರಾಥಮಿಕ ತರಗತಿಗಳ ಪುಸ್ತಕಗಳಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ. ಕಾರಣ ಅವು ಪಠ್ಯದ ಟೆಕ್ಸ್ಟ ಅನ್ನೇ ಅವಲಂಬಿಸಿರುತ್ತವೆ.

## ಭಾಷೆ ಮತ್ತು ತಾರ್ಕಿಕ ಸಾಮಥ್ರ್ಯ

ಭಾಷಾ ಕಲಿಕೆಯ ಸಂದರ್ಭದಲ್ಲಿ ಇನ್ನೊಂದು ಮಹತ್ವದ ಸಂಗತಿ ಇದೆ. ಅದೆಂದರೆ ತಾರ್ಕಿಕ ಸಾಮರ್ಥ್ಯದ ಬೆಳವಣಿಗೆ. ಪ್ರತಿಯೊಂದು ಟೆಕ್ಸ್ಟ ನಲ್ಲೂ ತಾರ್ಕಿಕ ಕ್ರಮಬದ್ಧತೆ ಇರುತ್ತದೆ ಮತ್ತು ಅದರ ಬೇರೆ ಬೇರೆ ಭಾಗಗಳ ನಡುವೆ ಪರಸ್ಪರ ಸಂಬಂಧವಿರುತ್ತದೆ. ಈ ತಾರ್ಕಿಕ ಸಂಬಂದ ಮತ್ತು ಕ್ರಮಬದ್ಧತೆ ಮಗುವಿನ ತಾರ್ಕಿಕ ಬೆಳವಣಿಗೆಗೆ ಬಹಳಷ್ಟು ನೆರವಾಗುತ್ತದೆ. ಓದುವಾಗ ಒಂದು ವಾಕ್ಯದೊಂದಿಗೆ ಮತ್ತು ಅದರ ಒಂದು ಭಾಗದೊಂದಿಗೆ ಮುಂದಿನ ಸಂಗತಿಯ ಸಂಬಂಧವನ್ನು ಜೋಡಿಸುವುದು ಮತ್ತು ಮೊದಲ ವಾಕ್ಯದಲ್ಲಿ ಹೇಳಿದ ಸಂಗತಿಯ(ವಿಷಯದ) ಬೆಳಕಿನಲ್ಲಿ ಮುಂದಿನ ಭಾಗವನ್ನು ಒರೆಹಚ್ಚಿ ನೋಡುವುದು ತಾರ್ಕಿಕತೆಯನ್ನು ಬೇಳೆಸುತ್ತದೆ. ಇದರಲ್ಲಿ ಕಾರ್ಯಕಾರಣ ಸಂಬಂದಗಳು ಇರಬಹುದು ಇಲ್ಲವೆ ಯಾವುದಾದರೂ ಕಥನದ ಆಧಾರದ ವಿವೇಚನೆ ಇರಬಹುದು ಅಥವಾ ಯಾವುದಾದರೂ ವಿಷಯದ ವಿಸ್ತಾರ ಇಲ್ಲವೆ ನಿಷೇಧವಿರಬಹುದು. ಕ್ರಮಿಕತೆ ಮತ್ತು ಕಾರ್ಯಕಾರಣ ಸಂಬಂಧವೂ ಸೇರಿರುವಂಥ ಸರಳಾತಿಸರಳ ಕಥೆಗಳಲ್ಲಿ ಘಟನಾಕ್ರಮದ ವಿವರಣೆ ಇರುತ್ತದೆ. ಇದರೊಂದಿಗೆ ಕಲ್ಪನೆಯ ಅವಕಾಶ ಮತ್ತು ಅದರ ಆಧಾರದ ಮೇಲೆ ತಾರ್ಕಿಕ ಸಂಬಂಧವನ್ನು ನಿರ್ಮಿಸುವ ಅವಕಾಶವಿರುತ್ತದೆ. ಒಂದು ಒಳ್ಳೆಯ ಕಥೆಯಲ್ಲಿ ಈ ಘಟನೆ ಒಂದು ವೇಳೆ ಹೀಗೆ ಆಗದೆ ಹಾಗೆ ಆದರೆ ಏನಾಗುತ್ತೆ, ಅಥವಾ ಈ ಘಟನೆಯ ಕಾರಣದಿಂದಾಗಿ ಇದು ಆದರೆ, ಈ ಘಟನೆ ನಡೆಯುವುದಕ್ಕೆ ಕಾರಣವಾದ ಮಗ್ಗುಲುಗಳು ಯಾವು ಇದ್ದುವು? ಎಂದು ನಿಮ್ಮ ಬುದ್ದಿಯಲ್ಲಿ ಬರುತ್ತದೆ. ಈ ಬಗೆಯ ಎಲ್ಲ ಥರದ ತರ್ಕ ನಡೆಯುವುದು ಪ್ರಾರಂಭದಿಂದಲೇ ಮಗುವಿಗೆ ಬಹಳ ಅಗತ್ಯ. ಮಕ್ಕಳ ಹತ್ತಿರ ನಾವು

ಮಾತನಾಡುವಾಗ ಅವನ ತಾರ್ಕಿಕ ಬೆಳವಣಿಗೆಯೂ ಭಾಷಿಕ ಸಾಮರ್ಥ್ಯದೊಂದಿಗೆ ಲಗತ್ತಾಗಿದೆ ಮತ್ತು ಅದು ಕೇವಲ ಇತರೆ ವಿಷಯಗಳ ಜವಾಬ್ದಾರಿ ಅಲ್ಲ, ಜೊತೆಗೆ ಅನ್ಯ ವಿಷಯಗಳಿಂದ ಆಗುವಂಥದೂ ಅಲ್ಲ ಎಂಬುದನ್ನು ಗಮನದಲ್ಲಿಟ್ಟುಕೊಂಡದ್ದೇ ಆದರೆ ಮಗುವಿಗೆ ಅದರ ತಾರ್ಕಿಕ ಸಾಮರ್ಥ್ಯದ ಬೆಳವಣಿಗೆಯಲ್ಲಿ ನೆರವು ದೊರೆಯುತ್ತದೆ.

ಭಾಷೆ ಮತ್ತು ಇತರೆ ವಿಷಯಗಳ ಸಂಬಂಧವನ್ನು ಈಗ ಶಿಕ್ಷಣದ ಎಲ್ಲ ದಾಖಲೆಗಳಲ್ಲಿ(ಕಾಗದ ಪತ್ರಗಳಲ್ಲಿ) ಅಂಗೀಕರಿಸಲಾಗಿದೆ. ಆದರೆ ರಾಜ್ಯಗಳ ಪ್ರಾಥಮಿಕ ಶಾಲೆಯ ಪುಸ್ತಕಗಳಲ್ಲೇ ಇದು ಕಾಣದೊರೆಯುವುದಿಲ್ಲ.  ಎಷ್ಟರ ಮಟ್ಟಿಗೆ ಎಂದರೆ ಎನ್‌ಸಿಇಆರ್‌ಟಿಯ ಪುಸ್ತಕದ ಪಾಠಗಳಲ್ಲೂ ಇದು ಆಗೊಮ್ಮೆ ಈಗೊಮ್ಮೆ ಮಾತ್ರ ಕಂಡುಬರುತ್ತದೆ. ಈ ಮಾತನ್ನು ಪಾಠಗಳ ಟೆಕ್ಸ್ಟ್ ನ ಸ್ವಭಾವ ಮತ್ತು ಅಭ್ಯಾಸ ಎರಡರ ಬಗ್ಗೆಯೂ ಹೇಳಬಹುದಾಗಿದೆ.

ಎಷ್ಟು ಭಾಷೆಗಳನ್ನು ಕಲಿಸುವುದು?

ಈ ಹಂತದಲ್ಲಿ ಇನ್ನೊಂದು ಮಹತ್ವದ ಪ್ರಶ್ನೆ ಏಳುತ್ತದೆ. ಅದೆಂದರೆ ಪ್ರಾಥಮಿಕ ಹಂತದಲ್ಲಿ ಎಷ್ಟು ಭಾಷೆಗಳನ್ನು ಕಲಿಸಬೇಕು ಮತ್ತು ಏಕೆ ಎಂಬ ಪ್ರಶ್ನೆ. ಪ್ರಶ್ನೆ ತುಂಬ ಸರಳವಾದುದಲ್ಲ. ತರಗತಿಯಲ್ಲಿ ಬರುವ ಭಾಷೆಗಳೆಲ್ಲಕ್ಕೂ ತರಗತಿಯಲ್ಲಿ ಜಾಗವಿರಬೇಕು ಎಂಬ ಒಂದು ಸಂಗತಿಯನ್ನು ನಾವು ಒಪ್ಪುತ್ತೇವೆ. ಕನಿಷ್ಠಪಕ್ಷ ಬಾಲಕನು(ಮಗು) ತನ್ನ ಭಾಷೆಯಲ್ಲಿ ತನ್ನ ಭಾವಗಳನ್ನು ತಳೆಯಲು ಮತ್ತು ಅದರಿಂದ ಇತರೆ ಹುಡುಗರು ಅಂತರ ಕ್ರಿಯೆಗಳನ್ನು ಮಾಡಲು ಸಾಧ್ಯವಾಗುವ ಸಲುವಾಗಿ ಹಾಗೂ ಪ್ರತಿಯೊಬ್ಬ ಹುಡುಗನ ಕೆಲವೊಂದು ಭಾಗವನ್ನು ತಾನು ತಿಳಿದುಕೊಳ್ಳುವುದು ಸಾಧ್ಯವಾಗಲೆಂಬ ದೃಷ್ಟಿಯಿಂದ ಇದು ಶಿಕ್ಷಕನ ಪ್ರಯತ್ನವಾಗಬೇಕು. ಪ್ರತಿ ಹುಡುಗನ ಭಾಷೆಯ ಹಿನ್ನೆಲೆ, ಅವನ ಸಂಸ್ಕೃತಿ, ಅವನ ವಿಚಾರ ತಂತ್ರಗಳು, ಅವನ ಮೌಲ್ಯಗಳು, ಮತ್ತು ಅವನ ಜೀವನ ಶೈಲಿ ಎಲ್ಲದರ ಪ್ರತಿಬಿಂಬ ತರಗತಿಯಲ್ಲಿ ಆಗುವ ಸಲುವಾಗಿ ಪ್ರಾಥಮಿಕ ಹಂತದಲ್ಲಿ ತರಗತಿಯು ಬಹು ಭಾಷಿಕವಾಗುವುದು ಅಗತ್ಯ. ಅದರಲ್ಲಿ ಯಾವುದನ್ನೂ ಹೆಚ್ಚು ಉಚ್ಚ ಹಂತದಲ್ಲಿ ಇರಿಸಕೂಡದು. ಆದರೆ ಓದಲು ಮತ್ತು ಬರೆಯಲು ನಾವು ಎಷ್ಟು ಭಾಷೆಗಳನ್ನು ತೆಗೆದುಕೊಳ್ಳಬೇಕೆಂಬ ಪ್ರಶ್ನೆ ಏಳುತ್ತದೆ.  ಎಲ್ಲ ಮಕ್ಕಳ ಭಾಷೆಗಳನ್ನು ಓದುವ ಮತ್ತು ಬರೆಯುವ ಸಲುವಾಗಿ ತೆಗೆದುಕೊಳ್ಳಬೇಕೇನು? ತರಗತಿಯಲ್ಲಿ ಮಕ್ಕಳ ಎಲ್ಲ ಭಾಷೆಗಳಲ್ಲಿ ಓದುವುದು ಮತ್ತು ಬರೆಯುವುದು ಸಾಧ್ಯವಾಗುತ್ತದೇನು? ಹಾಗೆಯೇ 1 ಮತ್ತು 2 ಭಾಷೆಗಳಲ್ಲಿ ಮಾಡಿದ ಹಾಗೆಯೇ ನಾವು ಎಲ್ಲ ಭಾಷೆಗಳಲ್ಲಿ ಆಲಿಸುವುದು, ಮಾತನಾಡುವುದು, ಅರ್ಥಮಾಡಿಕೊಳ್ಳುವುದು(ತಿಳಿದುಕೊಳ್ಳುವುದು) ಮತ್ತು ಅಭಿವ್ಯಕಿಸುವುದರಲ್ಲಿ ಅಷ್ಟೇ ಬೆಳವಣಿಗೆಯನ್ನು ಮಾಡಲು ಸಾಧ್ಯವೆ? ಈ ಪ್ರಶ್ನೆಗಳ ಬಗ್ಗೆ ಯೋಚಿಸಬೇಕಾಗುತ್ತದೆ. ಕಾರಣ, ಒಟ್ಟಾರೆ ಭಾಷಿಕ ಸಾಮರ್ಥ್ಯಗಳ ಬೆಳವಣಿಗೆಯಲ್ಲಿ ಮಾತಾಡುವ, ಆಲಿಸುವ, ಅರ್ಥಮಾಡಿಕೊಳ್ಳುವ, ಮತ್ತು ಅವುಗಳ ಅಂತರ್ ಸಂಬಂಧಗಳ ವಲಯವನ್ನು ಪರೀಕ್ಷಿಸುವ(ಅರ್ಥಮಾಡಿಕೊಳ್ಳುವ) ಸಂಭವ ಉಂಟಾಗಬಹುದು. ಈ ಸಂಗತಿಯು(ವಿಷಯ)

ಬಹುಭಾಷಿಕತೆಯೊಂದಿಗೆ ಮಾತ್ರವಲ್ಲ, ತರಗತಿಯಲ್ಲಿ ಮಕ್ಕಳ ಮಾತೃಭಾಷೆಗಳ ಬಳಕೆಯೊಂದಿಗೂ ಲಗತ್ತಾಗಿದೆ. ಮಕ್ಕಳ ಭಾಷೆಗಳ ಬಳಕೆಗೆ ಸಂಬಂಧಿಸಿದಂತೆ ಇದೇನೂ ಹೊಸ ಸಂಗತಿಯಲ್ಲ. ಅಧ್ಯಯನಕಾರರು ಬಹಳ ಹಿಂದೆಯೇ ಈ ವಿಚಾರವನ್ನು(ಸಂಗತಿಯನ್ನು) ಹೇಳುತ್ತಿದ್ದರು. ಇದು 'ಏಕಲವ್ಯ' ದ ಭೋಜನ(ಪ್ರಾಶಿಕ) ಕಾರ್ಯಕ್ರಮದ ತಳಹದಿಯ ತಿಳಿವಳಿಕೆಯಲ್ಲೂ ಇತ್ತು. ಎನ್‌ಸಿಎಫ್ 2005 ಮತ್ತು ಎನ್‌ಇಪಿ 2020ರಲ್ಲೂ ಇದರ ಚರ್ಚೆ(ಉಲ್ಲೇಖ) ಅಗಿದೆ. ಇದು ಹೇಗೆ ಆಗಬೇಕು ಎಂಬುದೇ ಪ್ರಶ್ನೆ. ಇದರ ಈಡೇರಿಕೆಗೆ ಕೆಲವು ಶರತ್ತುಗಳು ಇವೆ.

ಇದನ್ನು ಮಾಡಬೇಕೆಂದರೆ ಮಕ್ಕಳ ಮಧ್ಯೆ ಪರಸ್ಪರ ಮಾತುಕತೆ ನಡೆಯುವುದು ಮತ್ತು ಶಿಕ್ಷಕರು ಮತ್ತು ಮಕ್ಕಳ ಮಧ್ಯೆಯೂ ಮಾತುಕತೆ ನಡೆಯುವುದು ಅವಶ್ಯಕ. ತರಗತಿಯಲ್ಲಿ ಬಳಸಲು ಬಯಸುವ ಅಂದರೆ ಮಕ್ಕಳು ತಮ್ಮ ಮಾತುಕತೆಯಲ್ಲಿ ಸ್ವಾಭಾವಿಕ ರೂಪದಲ್ಲಿ ಬಳಸುವ ಆ ಎಲ್ಲ ಭಾಷೆಗಳಲ್ಲಿ ಆಗಬೇಕು. ಹಾಗೂ ಆ ಸಂವಾದದ ಹಂತವೂ ಸಾವಕಾಶವಾಗಿ ಬದಲಾಗಬೇಕು. ಹಾಗೆ ನೋಡಿದರೆ ಈ ಬಗೆಯ ಮಾತುಕತೆ ಯಾವುದೇ ಭಾಷೆಯನ್ನು ಕಲಿಸುವ ತರಗತಿಯಲ್ಲಿ ಅಗಬೇಕು. ಆದರೆ ಅವರಿಗೆ ಮಾತೃಭಾಷೆಯನ್ನು ಮಾಧ್ಯಮ ರೂಪದಲ್ಲಿ ಬಳಕೆ ಮಾಡಬೇಕಿದ್ದರೆ ಅಥವಾ ಅದರಲ್ಲಿ ಸಮರ್ಥವಾಗಿ ಓದಬೇಕಾಗಿದ್ದರೆ ಇನ್ನೂ ಬಹಳಷ್ಟು ಆಗಬೇಕಾಗುತ್ತದೆ. ನಿದರ್ಶನಕ್ಕೆ ಬಹಳಷ್ಟು ವಿವಿಧ ಬಗೆಯ ಟೆಕ್ಸ್ಟ್ ಗಳು(=ಪಠ್ಯಗಳು) ಆ ಭಾಷೆಗಳಲ್ಲಿ ಬೇಕಾಗಬಹುದು. ಇದು ತರಗತಿಯಲ್ಲಿ ಕಲಿಯಬೇಕಾಗುವ ಆ ಎಲ್ಲ ಭಾಷೆಗಳಲ್ಲಿ ಆಗಬೇಕಾಗುತ್ತದೆ. ಮೌಖಿಕ ಪಠ್ಯವನ್ನಂತೂ ಮಕ್ಕಳು ತರುತ್ತಾರೆ. ಆದರೆ ಇಂಥ ಬಹಳಷ್ಟು ಲಿಖಿತ ಪಠ್ಯಗಳು ಬೇಕಾಗುತ್ತವೆ. ಇದರ ಹೊರತಾಗಿ ಈ ಎಲ್ಲ ಭಾಷೆಗಳಲ್ಲಿ ಯಾವ ಬಗೆ ಪಠ್ಯಗಳು ಮಕ್ಕಳ ಮುಂದೆ ಬರುತ್ತಿವೆ, ಆ ಪಠ್ಯಗಳಲ್ಲೂ ವೈವಿಧ್ಯವಿರಬೇಕು ಮತ್ತು ಅವುಗಳ ಮಟ್ಟವೂ ಬದಲಾಗಬೇಕು. ವ್ಯಾಸಂಗ ಕ್ರಮದ ರಚನೆಯ ದೃಷ್ಟಿಯಿಂದ ಅವಶ್ಯಕವಿರುವ ಆ ಬಗೆಯ ಸಾಮಗ್ರಿಗಳು ಮಕ್ಕಳ ಎಲ್ಲ ಭಾಷೆಗಳಲ್ಲೂ ಲಭ್ಯವಾಗುವಂತೆ ಮಾಡುವುದು ಕಷ್ಟ. ಆದಾಗ್ಯೂ ಎಲ್ಲ ಭಾಷೆಗಳಲ್ಲೂ ಅದರ ಬೆಳವಣಿಗೆ ಅಷ್ಟೇ ಸಾಧ್ಯವಾಗಲು ಈ ರೀತಿಯ ಅವಕಾಶಗಳು ಮಕ್ಕಳಿಗೆ ಎಲ್ಲ ಭಾಷೆಗಳಲ್ಲಿ ದೊರೆಯುವುದು ಮಹತ್ವಪೂರ್ಣವಾದ್ದು. ಓದುವ ಭಾಷೆ ಸ್ಥಳೀಯವಾಗಬಹುದು, ಅಥವಾ ಹಿಂದಿ ಇಲ್ಲವೆ ಇಂಗ್ಲಿಷ್ ಆಗಬಹುದು, ತರಗತಿಯಲ್ಲಿನ ಸಂವಾದವು ಬಹಳಷ್ಟು ಭಾಷೆಗಳಲ್ಲಿ ಆಗಬೇಕಗುತ್ತದೆ. ಯಾವುದೇ ಹಂತದ ವರೆಗೆ ಇದು ಹೇಗೆ ಸಾಧ್ಯವಾಗುತ್ತದೆ ಎಂಬುದರ ಬಗ್ಗೆ ಕೂಡ ಯೋಚಿಸಬೇಕಾಗುತ್ತದೆ. ತರಗತಿಯಲ್ಲಿ ನಾವು ಮಕ್ಕಳೊಂದಿಗೆ ಎಷ್ಟು ಹೆಚ್ಚಿನ ಭಾಷೆಗಳನ್ನು ನಾವು ಬಳಸುತ್ತೇವೋ ಅಷ್ಟೇ ಹೆಚ್ಚಾಗಿ ಮಗುವಿನ ಭಾವನಾತ್ಮಕ ಮತ್ತು ಮಾನಸಿಕ ಬೆಳವಣಿಗೆ ಸಾಧ್ಯವಾಗುತ್ತದೆ ಎನ್ನುವ ದೃಷ್ಟಿಯಿಂದಲೂ ಇದು ಮಹತ್ವದ್ದು. ಅವನ ಮಾನಸಿಕ ವರ್ತುಲ ಹೆಚ್ಚಾಗಿ ಭಾಷಣಗಳು ಮತ್ತು ಅವುಗಳೊಂದಿಗೆ ಲಗತ್ತಾಗಿರುವ ವಿಚಾರ ತಂತ್ರಗಳ ಕಾರಣದಿಂದ ಇನ್ನಷ್ಟು ಹೆಚ್ಚು ವ್ಯಾಪಕವಾಗುತ್ತದೆ. ಬೇರೆ ಬೇರೆ ಭಾಷೆಗಳ ಶಬ್ದಗಳು ಮತ್ತು ಅವುಗಳೊಂದಿಗೆ ಸೇರಿರುವ(ಲಗತ್ತಾಗಿರುವ) ವಿಚಾರಗಳನ್ನು ಬೇರೆ ಭಾಷೆಯಲ್ಲಿ ಬಳಕೆಮಾಡಿದಾಗ ಆ

ಭಾಷೆಗೂ ಆ ವಿಚಾರಗಳು ವಿಚಾರ ತಂತ್ರಗಳು ಸಮ್ಮಿಳಿತವಾಗುತ್ತವೆ ಮತ್ತು ಆ ರೀತಿಯ ವಿಚಾರಗಳ ಅಭಿವ್ಯಕ್ತಿ ಆ ಭಾಷೆಯಲ್ಲಿ ಸಾಧ್ಯವಾಗುತ್ತದೆ.

ಕಲಿಸುವುದರಲ್ಲಿ ಏನು ಸೇರಿರಬೇಕು ಮತ್ತು ಎಷ್ಟು

ಮೇಲಿನ ಚರ್ಚೆಗಳಿಂದ ಹೊರಪಡುವ ಅಂಶಗಳೆಂದರೆ ಭಾಷೆಯನ್ನು ಕಲಿಸುವುದರ ಪ್ರಮುಖ ಉದ್ದೇಶ ಸ್ವತಂತ್ರನಾದ ಓದುಗ, ಆತ್ಮವಿಶ್ವಾಸದಿಂದ ಕೂಡಿದ ಶ್ರೋತೃ, ಮತ್ತು ಅಭಿವ್ಯಕ್ತಿಯಲ್ಲಿ ಸ್ವಾತಂತ್ರ್ಯವುಳ್ಳ ಮನುಷ್ಯನನ್ನು ನಿರ್ಮಾಣ ಮಾಡುವುದು. ಆತ್ಮವಿಶ್ವಾಸದಿಂದ ಕೂಡಿದ ಶ್ರೋತೃ ಎಂದರೆ ಅವನಿಗೇನೂ ಅರ್ಥವಾಗಿಲ್ಲ ಅಥವಾ ಅವನು ಈ ಮುಂಚೆ ಯೋಚಿಸಿದ್ದು ತಪ್ಪೇ ಆಗಿತ್ತು ಮತ್ತು ಈಗ ಹೇಳಲಾಗುತ್ತಿರುವ ವಿಚಾರ(ಮಾತು) ಸರಿಯಾಗಿದೆ  ಹಾಗಾಗಿ ಸ್ವೀಕರಿಸಬಹುದು ಎಂಬ ಮಾತುಗಳಿಂದ ಗಾಬರಿಗೊಳ್ಳದಿರುವವನು ಎಂದು. ಶ್ರೋತೃ ಯಾರೆಂದರೆ ತಾನು ಆಲಿಸಿದ ವಿಚಾರದಿಂದ ಅಂತರ್ಕ್ರಿಯೆಗಳನ್ನು ಮಾಡಬಲ್ಲವನು, ಪಾಠಕ ಯಾರೆಂದರೆ ಓದಿದ ವಿಚಾರದಿಂದ ಅಂತರ್ಕ್ರಿಯೆಗಳನ್ನು ಮಾಡಬಲ್ಲವನು ಮತ್ತು ಅದರ ಮೇಲೆ ಪ್ರಶ್ನೆ ಮಾಡಬಲ್ಲವನು ಹಾಗೂ ಆಲೋಚನೆಯ ತನ್ನ ಅಚ್ಚಿನಲಿ(ಪಡಿಯಚ್ಚು)ಿಲ ಅದನ್ನು ಸೇರಿಸಿಕೊಳ್ಳಬಲ್ಲವನು. ಅವನಲ್ಲಿ ಓದುವ ಆಸಕ್ತಿ ಇರಬೇಕು. ಇದಲ್ಲದೆ ಅವನು ತನ್ನ ವಿಚಾರಗಳನ್ನು ಕ್ರಮಬದ್ಧಗೊಳಿಸಿ ಹೇಳಬಲ್ಲವನು ಮತ್ತು ಬರೆಯಬಲ್ಲವನು ಹಾಗೂ ಇದರಲ್ಲಿ ಹಿಂಜರಿಕೆಯಿಲ್ಲದವನು ಆಗಬೇಕು. ಅವನಲ್ಲಿ ಮಾತುಕತೆ ನಡೆಸುವ ತಿಳಿವಳಿಕೆ ಮತ್ತು ಅಭ್ಯಾಸವಿರಬೇಕು. ಹಾಗೂ ಓದಿನಲ್ಲಿ ಅವನಿಗೆ ಆಸಕ್ತಿ ಇರಬೇಕು ಮತ್ತು ಪುಸ್ತಕಗಳನ್ನು ಹುಡುಕಿ ಓದಬೇಕು. ಅವನು ಕ್ರಮೇಣ ಹೆಚ್ಚು ಒಳ್ಳೆಯ ಮತ್ತು ಗಾಢವಾದ ಪುಸ್ತಕಗಳನ್ನು ಓದಬೇಕೆಂದೂ ನಾವು ಬಯಸುತ್ತೇವೆ. ಅವನು ಪುಸ್ತಕಗಳಿಂದಾಗಲಿ, ಇಲ್ಲವೆ ವ್ಯಕ್ತಿಗಳಿಂದಾಗಲಿ, ತನ್ನಲ್ಲೆದ್ದ ಪ್ರಶ್ನೆಗಳ ಬಗ್ಗೆ ವಿಮರ್ಶೆ ಮಾಡಬೇಕೆಂದು ಬಯಸುತ್ತೇವೆ. ಇದರಿಂದ ತಿಳಿದುಕೊಳ್ಳುವ(ಅರ್ಥಮಾಡಿಕೊಳ್ಳುವ), ಹಾಗೂ ಅಭಿವ್ಯಕ್ತಿಯ ನಿರಂತರವಾದ ಬೆಳವಣಿಗೆ ಆಗುತ್ತಲೇ ಇರುತ್ತದೆ ಮತ್ತು ಈ ಬೆಳವಣಿಗೆಯಲ್ಲಿ ಅನುಭವ ಮತ್ತು ಅನ್ಯಜ್ಞಾನದ ಆಕರಗಳಿಂದ ಪ್ರಾಪ್ತವಾದ ತಿಳಿವಳಿಕೆ ನೆರವಾಗುತ್ತದೆ.  ಇದರೊಂದಿಗೆ ಜೋಡಿಸಿಯೇ ನಾವು ಆಲಿಸಿದ ವಿಮರ್ಶೆಯನ್ನು ಮತ್ತು ಪುಸ್ತಕಗಳನ್ನು ಓದಿ ತಿಳಿದುಕೊಳ್ಳುತ್ತೇವೆ.  ಇದನ್ನು ಮಾಡಲು  ತರಗತಿಯ ಸಂರಚನೆಯನ್ನು ಬದಲಿಸಬೇಕಾದ ಅಗತ್ಯವಿದೆ. ಜೊತೆಗೇ ಭಾಷೆಯನ್ನು ಕಲಿಯುವ ಮತ್ತು ಕಲಿಸುವ ಪದ್ಧತಿಯನ್ನು ಬದಲಾಯಿಸುವ ಅಗತ್ಯವೂ ಇದೆ.  ಈ ಬಗೆಯ ಅವಕಾಶಗಳನ್ನು ನಿರ್ಮಿಸಿಕೊಡುವ ವಿಚಾರ ಬಹಳವಾಗಿ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳಲ್ಲಿ ಕಂಡುಬರುವುದಿಲ್ಲ.

ಅರ್ಥಮಾಡಿಕೊಳ್ಳುವ ಮತ್ತು ಅಭಿವ್ಯಕ್ತಪಡಿಸುವ ಸಾಮರ್ಥ್ಯಗಳು ಎಂಥವೆಂದರೆ ಅವುಗಳ ಬೆಳವಣಿಗೆ ನಿರಂತರವಾಗಿ ಅಗುತ್ತಲೇ ಇರುತ್ತದೆ. ಹಾಗಾಗಿ ಕಲಿಯುವವನು ಇಲ್ಲಿಯರೆಗೂ ತಲುಪಬೇಕು ಎಂದು ಯಾರಾದರೂ ಹೇಳಿದರೆ ಅಂಥ ಯಾವುದೇ ವಿಶಿಷ್ಟ ಗುರಿಗಳನ್ನು ನಿರ್ಧರಿಸಲಾಗುವುದಿಲ್ಲ. ಇದರ ಗುರಿ ಇದಾಗಿದೆ ಎಂದು ಮಾತ್ರ ಹೇಳಲು ಸಾಧ್ಯ. ಈ

ಎರಡರಲ್ಲಿ ಹಾಗೂ ಈ ಎರಡೂ ಪ್ರಕಾರಗಳಲ್ಲಿ ಸೇರಿರುವ ಇಚ್ಛೆ ಮತ್ತು ಆತ್ಮವಿಶ್ವಾಸ ಹೆಚ್ಚುತ್ತಿರಲಿ. ಎನ್ಸಿಇಆರ್ಟಿಯ ಪಠ್ಯಕ್ರಮದಲ್ಲಿ ಇದನ್ನು ಬೃಹತ್ ಉದ್ದೇಶಗಳ ರೂಪದಲ್ಲಿ ಬರೆಯಲಾಗಿದೆ. ಭಾಷೆಯು ಯಥಾರ್ಥ ಮತ್ತು ಕಲ್ಪನೆ ಎರಡರ ರಚನೆಯನ್ನೂ ಮಾಡುವ ಮತ್ತು ಅದನ್ನು ವ್ಯಕ್ತಪಡಿಸುವ ಪಾತ್ರವನ್ನು ನಿಭಾಯಿಸುತ್ತದೆ ಎಂಬ ತಿಳಿವಳಿಕೆಯನ್ನು ನಮ್ಮ ಶಾಲೆಗಳ ಪ್ರಕ್ರಿಯೆಯಲ್ಲಿ ತೋರಿಸಬೇಕಾಗುತ್ತದೆ ಎಂಬುದನ್ನು ಕೂಡ ಹೇಳಲಾಗಿದೆ. ಆದರೆ ಎನ್‌ಸಿಇಆರ್ಟಿಯ ಪಠ್ಯಪುಸ್ತಕಗಳಲ್ಲಿ ಇದು ಕಂಡುಬರುತ್ತಿದ್ದಾಗ್ಯೂ ಈ ರೀತಿಯ ತಿಳಿವಳಿಕೆಯ ವ್ಯಾಖ್ಯಾನ ಮತ್ತು ಅದರ ಬೆಳವಣಿಗೆಯ ಹಾದಿಗಳಲ್ಲಿ ಹೆಚ್ಚಿನ ರಾಜ್ಯಗಳ ಒಂದರಿಂದ ಐದರವರೆಗಿನ ತರಗತಿಗಳ ಪಠ್ಯಕ್ರಮದಲ್ಲಿ ಮತ್ತು ಪಠ್ಯ ಪುಸ್ತಕಗಳಲ್ಲಿ ತುಂಬ ಜಾಸ್ತಿ ಸಿಕ್ಕುವುದಿಲ್ಲ. ನಿದರ್ಶನಕ್ಕೆ ಕೆಲವು ಕಡೆ ಕಥೆಯ ಸಂದರ್ಭದಲ್ಲಿ ಕಲ್ಪನೆ ಮಾಡಿಕೊಳ್ಳುವುದು ಮತ್ತು ಯಾವುದೋ ಒಂದು ಘಟನೆಯಲ್ಲಿ ಪಾತ್ರದ ಜಾಗದಲ್ಲಿ ಓದುಗನು ಇದ್ದಿದ್ದರೆ ಅವನೇನು ಮಾಡುತ್ತಿದ್ದ ಎಂಬಂಥ ಸಮಸ್ಯೆಗಳಂತೂ ಇವೆ. ಆದರೆ ಅವುಗಳಲ್ಲಿ ಆ ರೀತಿಯ ಹರಿತ(ತೀಕ್ಷ್ಣತೆ) ಮತ್ತು ಮಗುವಿನಿಂದ ಅದರ ಭಾಷೆಯಲ್ಲಿಯೇ ಅದರೂ ತನ್ನ ಮಾತನ್ನು ವ್ಯಕ್ತಪಡಿಸುವಂಥ ಆಗ್ರಹ ಮತ್ತು ಅದರ ಬಗ್ಗೆ ಸಹಪಾಠಿಗಳೊಂದಿಗೆ ಚರ್ಚೆಯಂಥ ಮಗ್ಗುಲು(ದೃಷ್ಟಿ) ತುಂಬಾ ಕಡಿಮೆ. ತರಗತಿಯ ಬೇರೆ ಸಂದರ್ಭಗಳಲ್ಲೂ ಮಕ್ಕಳನ್ನು ತಮ್ಮ ಭಾಷೆಯಲ್ಲಿಯೇ ಮಾತನಾಡಲು ಪ್ರೇರಿಸುವ ಬಗ್ಗೆ ಮತ್ತು ತರಗತಿಯ ವಿಮರ್ಶೆಯಲ್ಲಿ ಆ ಬೇರೆ ಬೇರೆ ಭಾಷೆಗಳನ್ನು ಸೇರಿಸಿಕೊಂಡು ಹೇಗೆ ಬಳಸಬಹುದು ಎಂಬ ಬಗ್ಗೆ ಸೂಚನೆ ಇರುವುದಿಲ್ಲ. ಇದೆಲ್ಲವೂ ಹಿಂದಿಯಲ್ಲಿ ಆಗುತ್ತದೆ ಎಂಬ ಅಪೇಕ್ಷೆ ಇರುವುದು ಪುಸ್ತಕದ ಆಕೃತಿಯಿಂದ ತಿಳಿದು ಬರುತ್ತದೆ.

ಮಕ್ಕಳಿಗೆ ಓದುವುದರಲ್ಲಿ ಆಸಕ್ತಿ ಇರಬೇಕು ಎಂಬುದು ಈ ಬಗ್ಗೆ ಹೇಳುವ ಇನ್ನೊಂದು ಮಾತು. ಪ್ರಾಯೋಗಿಕ ಕಾರ್ಯಕ್ರಮಗಳ ಪುಸ್ತಕದ ಅಭ್ಯಾಸಗಳಲ್ಲಿ ಅನೇಕ ಕಡೆ ಬಗೆಬಗೆಯ ಟಾಸ್ಕ್ ಕೊಡಲಾಗಿರುತ್ತದೆ. ಅವಕ್ಕೆ ಉತ್ತರಿಸಲು ಬೇರೆ ಬೇರೆ ಪುಸ್ತಕಗಳನ್ನು ಓದಿಕೊಂಡು ಕೆಲವನ್ನು ಗೊತ್ತುಮಾಡಿಕೊಳ್ಳಬೇಕಾಗುತ್ತಿತ್ತು ಮತ್ತು ಕಾರ್ಯಕ್ರಮದ ಕಿಟ್ ಸೂಚಿಯಲ್ಲಿ ಮಕ್ಕಳಿಗಾಗಿ ಒಂದು ಸೈಟ್(=ಸ್ಥಳ) ಇರುತ್ತಿತ್ತು. ಅಲ್ಲದೆ ಶಾಲೆಯಲ್ಲಿ ನಿಯಮಿತ ಉಪಯೋಗವುಳ್ಳ ಒಂದು ಗ್ರಂಥಭಾಡಾರ ಸ್ಥಾಪಿಸಬೇಕು ಮತ್ತು ಮಕ್ಕಳು ಅದರ ಪೂರ್ಣ ಪ್ರಯೋಜನ ಪಡೆದುಕೊಳ್ಳುವಂತಾಗಬೇಕೆಂಬ ಅಗ್ರಹವಿತ್ತು. ಈ 100–200 ಪುಸ್ತಕಗಳ ಹೊರತಾಗಿ ಇನ್ನಷ್ಟು ಪುಸ್ತಕಗಳನ್ನೂ ಶಾಲೆಯಲ್ಲಿ ಖರೀದಿಸಬೇಕು ಮತ್ತು ಮೊದಲಿನಿಂದಲೂ ಇರುವ ಪುಸ್ತಕಗಳೂ ಮಕ್ಕಳಿಗೆ ದೊರಕಬೇಕು ಎಂಬ ಆಗ್ರಹವೂ ಇತ್ತು. ವ್ಯಾಸಂಗ ಕ್ರಮದ ಹಂತದಲ್ಲಿ ಇದನ್ನು ಹೇಳಲಾಗುತ್ತಿದ್ದರೂ ಈ ಆಗ್ರಹ ಇದರ ನಂತರ ಆದ ರಾಜ್ಯದ ಪುಸ್ತಕಗಳಲ್ಲಿ ಕಂಡುಬರುತ್ತಿಲ್ಲ. ಇದರ ಜೊತೆ ಜೊತೆಯಲ್ಲೇ ಅಥವಾ ಬಹುಶಃ ಇದೇ ಕಾರಣದಿಂದಲೇ ಬಹಳ:ಷ್ಟು ಶಾಲೆಗಳಲ್ಲಿ ಗ್ರಂಥಾಲಯ ಇಲ್ಲ ಮತ್ತು ಶಿಕ್ಷಣದ ಎಲ್ಲ ಸಂರಚನೆಗಳಲ್ಲಿ ಮತ್ತು ಶಿಕ್ಷಕರ ತಿಳಿವಳಿಕೆಯಲ್ಲಿ ಇತರೆ ಪುಸ್ತಕಗಳದೇನೂ ಪಾತ್ರವೇ ಇಲ್ಲ. ಅವರ ಪ್ರಕಾರ ಪಠ್ಯದ ಹೊರತಾದ್ದನ್ನು ಓದುವುದು ತಮ್ಮ ಸಾರ್ಥಕ ಶಿಕ್ಷಣದ ಸಮಯವನ್ನು ಹಾಳುಮಾಡುವುದಾಗಿದೆ.

ಇದರ ಹೊರತಾಗಿ ಮಕ್ಕಳು ತಮ್ಮನ್ನು ಅಭಿವ್ಯಕ್ತಿಸಿಕೊಳ್ಳುವುದರ ಬೆಳವಣಿಗೆಯಲ್ಲಿ ಇರುವ ಒಂದು ದೊಡ್ಡ ಮಗ್ಗುಲು(ಅಂಗ) ಮಕ್ಕಳು ತಪ್ಪು ಮಾಡಿಬಿಡುತ್ತಾರೆಂಬ ಭಯದಿಂದ ಆತಂಕಪಡುವುದು. ಲಿಖಿತ ಅಷ್ಟೇ ಅಲ್ಲ ಮೌಖಿಕ ಟೆಕ್ಷ್ಟ ಮತ್ತು ಪ್ರಶ್ನೆಗಳ ಉತ್ತರಗಳನ್ನು ನೆನಪಿಟ್ಟುಕೊಳ್ಳಲೆಂಬ ಉದ್ದೇಶದಿಂದ ಅವರಿಗೆ ಬರೆದು ಕೊಡಲಾಗುತ್ತದೆ. ಪ್ರಾಥಮಿಕ ಹಂತದಲ್ಲಿ (ಬಹುಶಃ ಅದರ ನಂತರದಲ್ಲೂ) ಮಕ್ಕಳು ಬರೆದ ಉತ್ತರಗಳು, ಅವುಗಳಲ್ಲಿ ವ್ಯಾಕರಣದ ತಪ್ಪುಗಳು ಮತ್ತು ಶಬ್ದಗಳಲ್ಲಿ ಸೇರಿರುವ ವರ್ಣಗಳ ಕ್ರಮ, ಮತ್ತು ಉಚ್ಚಾರಣ ವಿಧಾನಗಳಲ್ಲಿನ ತಪ್ಪುಗಳಿದ್ದರೂ ಸರಿ ಅವು ಅವರ ಸ್ವಂತದ್ದೇ ಆಗಿರಲೆಂಬ ಅಪೇಕ್ಷೆ ಕಂಡು ಬರುವುದಿಲ್ಲ. ಈ ತಪ್ಪುಗಳು ಕಲಿಕೆಯ ಮೆಟ್ಟಿಲುಗಳು ಮತ್ತು ದಿನ ನಿತ್ಯದ ಹೊಸ ಪ್ರಯತ್ನಗಳ ಅವಕಾಶಗಳಲ್ಲಿ ಮತ್ತು ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುವ ಹಾದಿಯಲ್ಲಿ ಈ ತಪ್ಪುಗಳು ಅವಶ್ಯಕವಾಗಿ ಆಗುವಂಥವೇ ಮತ್ತು ಇವು ಅಪೇಕ್ಷಿತವೇ. ಮಾಧ್ಯಮಿಕ ಮತ್ತು ಉಚ್ಚ ಪ್ರಾಥಮಿಕ ಹಂತದಲ್ಲಿ ವರ್ಣಗಳ ಕ್ರಮ, ಉಚ್ಚರಣಾ ವಿಧಾನಗಳು ಮತ್ತು ವ್ಯಾಕರಣದ ಶುದ್ದತೆಯ ಮೇಲೆ ಬಹಳ ಒತ್ತುಕೊಡಲಾಗುತ್ತಿರುವುದರಿಂದ ಅದು ಪ್ರಾಥಮಿಕದ ಮೇಲೂ ಪ್ರಭಾವ ಬೀರುತ್ತದೆ. ವ್ಯಾಸಂಗಕ್ರಮ ಮತ್ತು ಪಠ್ಯಕ್ರಮದ ಪರಿಪ್ರೇಕ್ಷ್ಯದ (ಕಣ್ಣೆಲೆ) ಪ್ರಕಾರ ವಿವರದ ವಲಯದಲ್ಲಿ ಇಲ್ಲದೆ ಇದ್ದರೂ ತರಗತಿಗಳಲ್ಲಿ ಮತ್ತು ಪಠ್ಯಪುಸ್ತಕಗಳಲ್ಲಿ ಸುಲಭವಾಗಿ ಕಂಡುಬರುತ್ತದೆ. ಪ್ರಾಥಮಿಕ ತರಗತಿಗಳಲ್ಲಿ ವ್ಯಾಕರಣದ ನಿಯಮಗಳನ್ನು ನೆನಪಿಟ್ಟುಕೊಳ್ಳುವುದರ ಬಗ್ಗೆ ಮತ್ತು ಪರಿಭಾಷೆಗಳು ಹಾಗೂ ಅವುಗಳ ಉದಾಹರಣೆಗಳನ್ನು ನೆನಪಿಟ್ಟುಕೊಂಡು ಹೇಳುವುದರ ಬಗ್ಗೆ ಬಹಳ ಅಭ್ಯಾಸಗಳಿವೆ. ಇವುಗಳ ಅಗತ್ಯ ಎಷ್ಟಿದೆ ಎಂಬುದೇ ಪ್ರಶ್ನೆ. ಯಾವುದಾದರೂ ಹಂತದವರೆಗೆ ಇದು ಅಗತ್ಯವಿದೆ ಎಂದಾದರೆ ಏಕೆ ಮತ್ತು ಯಾವ ರೀತಿಯ ಅಭ್ಯಾಸಗಳನ್ನು ಕೊಡಬೇಕು ಹಾಗೂ ನಿಯಮಗಳನ್ನು ಮಾತ್ರ ಪಾಲಿಸಬೇಕಾದ ಅಭ್ಯಾಸಗಳನ್ನು ಎಷ್ಟು ನೀಡಬೇಕು ಎಂಬುದನ್ನೂ ಯೋಚಿಸ ಬೇಕಾಗುತ್ತದೆ. ಒಟ್ಟಾರೆ ಪ್ರಶ್ನೆ ಎಂದರೆ ವ್ಯಾಕರಣದ ಆ ಭಾಗ ಮತ್ತು ಯಾವ ರೀತಿಯಲ್ಲಿ ಅದನ್ನು ಕಲಿಸಲಾಗುತ್ತದೆ ಅದರಿಂದ ಏನಾದರೂ ಪ್ರಯೋಜನವಾಗುತ್ತದೆಯೆ ಹಾಗೂ ಸಂದರ್ಭ, ಸಾರ್ಥಕತೆ, ಮತ್ತು ಗ್ರಾಹ್ಯತೆ ಉಳಿದುಬರಬೇಕೆಂದರೆ ಈಗ ಹೇಳಿರುವುದೆಲ್ಲವನ್ನೂ ಯಾವ ರೀತಿಯಲ್ಲಿ ಮಾಡಬೇಕು ಎಂಬುದೇ ಆಗಿದೆ.

ಎನ್‌ಸಿಇಆರ್‌ಟಿ ಮತ್ತು ಭಾರತೀಯ ಭಾಷೆಗಳ ನಿಲುವು ಪತ್ರ(ಸ್ಥಿತಿ ಪತ್ರ) ಮತ್ತು ಪಠ್ಯಕ್ರಮ ಹೇಳುವಂತೆ ಭಾರತೀಯ ಭಾಷೆಗಳ ಅಧ್ಯಯನ ಆಗಬೇಕು. ಆದ್ದರಿಂದ ವ್ಯಾಕರಣದ ತರಗತಿಯಲ್ಲಿ ಹೆಸರುಗಳನ್ನು ಒಳಗೊಂಡಿರುವ, ಕ್ರಿಯೆಯನ್ನು ಒಳಗೊಂಡಿರುವ, ವಿಶೇಷತೆಗಳನ್ನು ಹೇಳುವಂಥ ಶಬ್ದಗಳನ್ನು ಗುರುತಿಸುವ ಅಭ್ಯಾಸಗಳನ್ನು ಮಾಡಿಸುವಂಥ ಅಭ್ಯಾಸಗಳು ಇರಲಿ. ಇದೇ ರೀತಿಯಲ್ಲಿ ಲಿಂಗ, ಕಾಲ ಮತ್ತು ಕಾರಕಗಳ ಬಳಕೆಯ ಕಡೆಗೂ ಗಮನ ಬರುವಂತೆ ಮಾಡುವ ಸಂಭವವಿರುತ್ತದೆ. ಅದು ಎಲ್ಲಿಯವರೆಗೆ ಎಂದರೆ ಅವನು ಟೆಕ್ಷ್ಟ ಅನ್ನು ಅರ್ಥಮಾಡಿಕೊಳ್ಳಲು ಮತ್ತು ಬರೆದು ತಾನು ಹೇಳಬೇಕಾದುದನ್ನು ಹೇಳಲು ಅವನಿಗೆ ನೆರವು ದೊರೆಯುವ ಹಂತದ ವರೆಗೆ ಮಾತ್ರವೇ. ಈ ಪ್ರಯತ್ನ ಕೆಲವೇ ರಾಜ್ಯಗಳ

ಪುಸ್ತಕಗಳಲ್ಲಿ ಇದೆ. ಬಹಳಷ್ಟು ಪ್ರಯತ್ನಗಳು ಸಂದರ್ಭರಹಿತ ಶಬ್ದದ ಭೇದಗಳನ್ನು ಪ್ರಯೋಗ ಮಾಡುವುದರ ಬಗೆಗೆ ಇರುತ್ತವೆ.

ಇದರ ಹೊರತಾಗಿ ಟೆಕ್ಸ್ಟ ಅನ್ನು ಆಯ್ಕೆ ಮಾಡುವ ಸಮಯದಲ್ಲಿ ಇನ್ನೊಂದು ಮಾತನ್ನು, (ಎನ್‌ಸಿಇ.ಆರ್.ಟಿಯು ಪ್ರಕಟಿಸಿರುವ ಭಾರತೀಯ ಭಾಷೆಗಳ ನಿಲುವು ಪತ್ರ(ಸ್ಥಿತಿಪತ್ರದ )ಲ್ಲೂ ಅದನ್ನು ಹೇಳಿದೆ) ನೆನಪಿಟ್ಟುಕೊಳ್ಳುವುದು ಅತ್ಯಗತ್ಯ. ಟೆಕ್ಸ್ಟ ಅನ್ನು ಆಯ್ಕೆ ಮಾಡುವಲ್ಲಿ ಅದರ ಉಪಯುಕ್ತತೆ, ರೋಚಕತೆ. ಪ್ರಾಸಂಗಿಕತೆ ಮತ್ತು ಸಾರ್ಥಕತೆಗಳಷ್ಟೇ ಅದರ ಗ್ರಾಹ್ಯತೆಯ ಆಧಾರವಾಗಬೇಕು. ಸರಳತೆಯ ಅರ್ಥ ಲಿಪಿ ಅಂದರೆ ಬಳಸಲಾದ ಅಕ್ಷರಗಳು ಮತ್ತು ಅವುಗಳ ಸಂಖ್ಯೆಯಲ್ಲ. ವಾಕ್ಯದ ಉದ್ದ ಮತ್ತು ರಚನೆಯಷ್ಟೇ ಸರಳತೆಯಲ್ಲ. ಮಹತ್ವದ ಮಾತೆಂದರೆ ಆ ಟೆಕ್ಸ್ಟ ಮಕ್ಕಳಿಗೆ ಅದನ್ನು ಓದಲು ಏನಾದರೂ ಉದ್ದೇಶವನ್ನು ನೀಡುತ್ತದೆಯೆ ಇಲ್ಲವೆ ಎಂಬುದು. ಆ ಟೆಕ್ಷ್ಟ ನಲ್ಲಿ ವ್ಯಕ್ತಗೊಂಡಿರುವ ವಿಚಾರಗಳಲ್ಲಿ ಪರಸ್ಪರ ಸಾಮರಸ್ಯ ಮತ್ತು ಮಕ್ಕಳ ಆಸಕ್ತಿಯೊಂದಿಗೆ ಸೇರಿಕೊಂಡಿರುವುದು ಅದನ್ನು ಅರ್ಥಮಾಡಿಕೊಳ್ಳುವಲ್ಲಿ ನೆರವಾಗುತ್ತದೆ. ಇಷ್ಟಾಗಿಯೂ ಟೆಕ್ಷ್ಟ ಅಸಾಧಾರಣವಾದ ಉದ್ದುದ್ದನೆಯ ವಾಕ್ಯಗಳನ್ನೊಳಗೊಂಡಿರುವಂಥದಾಗಿರಬಾರದು ಎಂಬುದು ಕೂಡ ಮಹತ್ವದ ಸಂಗತಿ. ಅದು ಸ್ವಾಭಾವಿಕವಾದ ರೀತಿಯಲ್ಲಿ ಬರೆದಿರುವ ಟೆಕ್ಷ್ಟ ಆಗಿರಲಿ. ಇಂಥ ಟೆಕ್ಷ್‌ಟ್‌ಗಳು ಭಾಷೆಯನ್ನು ಓದುವುದರಲ್ಲಿ ಆಸಕ್ತಿಯನ್ನು ಹುಟ್ಟಿಸುತ್ತವೆ. ಅಲ್ಲದೆ ಡೀಕೋಡಿಂಗ್‌ನ ಪ್ರಾರಂಭಿಕ ಅಭ್ಯಾಸಕ್ಕೂ ಚೆನ್ನಾಗಿ ಬಳಸಿಕೊಳ್ಳಬಹುದಾಗಿರುತ್ತವೆ. ಹಿರಿಯರು ಮಹತ್ವದವೆಂದು ಮಾನ್ಯಮಾಡಿರುವ ಸಂದೇಶಗಳು ಹೇರಲ್ಪಟ್ಟಿರುವಂಥ ಟೆಕ್ಷ್‌ಟ್‌ಗಳು(ಅವು ಸಾಕಷ್ಟು ಹೆಚ್ಚು ಪ್ರಮಾಣದಲ್ಲಿ ಸಿಗುತ್ತವೆ) ಅಥವಾ ಡೀಕೋಡಿಂಗ್ ಅನ್ನು ಸರಳಗೊಳಿಸುವ ಉದ್ದೇಶದಿಂದ ಅಸಹಜವಾಗಿ ಬಲವಂತವಾಗಿ ಸಿದ್ಧಪಡಿಸಿರುವಂತ ಟೆಕ್ಷ್‌ಟ್‌ಗಳು ಉಪಯೋಗವಿಲ್ಲ. ಟೆಕ್ಷ್‌ಟ್‌ನಲ್ಲಿ ಬಳಕೆಯಲ್ಲಿರುವ ಭಾಷೆಯ ಸಹಜತೆ ಮತ್ತು ಸ್ವಾಭಾವಿಕ ರೀತಿಯಲ್ಲಿ ಬಳಸಲಾಗುತ್ತಿರುವ ಭಾಷೆಯೊಂದಿಗೆ ಲಗತ್ತಾಗಿರುವುದೂ ಟೆಕ್ಷ್ಟ ಅನ್ನು ಆಯ್ಕೆ ಮಾಡುವ ಮಹತ್ವದ ಆಧಾರ. ಕೆಲವು ರಾಜ್ಯಗಳ ಪುಸ್ತಕಗಳಲ್ಲಿ ಇದರ ಒಂದು ನೋಟದಂಥದು ಅಲ್ಲಿ ಇಲ್ಲಿ ಸಿಗುತ್ತದೆಯಾದರೂ ಹೆಚ್ಚಿನ ರಾಜ್ಯಗಳ ಪುಸ್ತಕಗಳು ಈ ದಿಕ್ಕಿನಲ್ಲಿ ಇಲ್ಲ. ಈ ರಾಜ್ಯಗಳ ಅಕಾಡೆಮಿಕ್ ಸಮೂಹಕ್ಕೆ ಎನ್‌ಸಿಇಆರ್‌ಟಿಯ ಪುಸ್ತಕಗಳು ಮತ್ತು ಖುಶಿ ಖುಶಿಯ ಟೆಕ್ಷ್ಟ ಪ್ರಕಾಗಳ ಬಗ್ಗೆ ಯೋಚಿಸಲು ಅವಕಾಶ ದೊರೆಯುತ್ತದೆ. ಪುಸ್ತಕಗಳಲ್ಲಿ ಪ್ರೇರಣೆ ನೀಡುವಂಥ ನಾಯಕರು, ತಪ್ಪು –ಸರಿಗಳ ಪ್ರಯತ್ನಗಳು, ನೈತಿಕ ದಾರಿಗಳಂಥ ವಿಷಯಗಳಿಗೆ ಸ್ಥಾನವಿಲ್ಲವೆಂದಲ್ಲ. ಆದರೆ ಈ ಬಲಾತ್ಕಾರದ ಮತ್ತು ಹೊರಿಸಲ್ಪಟ್ಟದ್ದಾಗಿ ಕಂಡುಬಂದಿಲ್ಲ. ಇವುಗಳಲ್ಲಿ ನೈತಿಕ ಹಾದಿಗಳ ಜೊತೆ ಜೊತೆಗೆ ಅವುಗಳಲ್ಲಿ ಅಡಗಿರುವ ತಾರ್ಕಿಕ ಆಧಾರಗಳೂ ಸೇರಿಕೊಳ್ಳುತ್ತವೆ.

ಯಾವ ರೀತಿಯ ಅಭ್ಯಾಸಗಳು ಇರಲಿ?

ಇದರ ಮೇಲೆ ನಿಲುವು ಪತ್ರ(=ಸ್ಥಿತಿಪತ್ರ )ದಲ್ಲಿ ಮಹತ್ವದ ಸಿದ್ಧಾಂತಗಳನ್ನು ಇರಿಸಲಾಗಿದ್ದರೂ ರಾಜ್ಯಗಳ ಪ್ರಾಥಮಿಕ ತರಗತಿಗಳ ಭಾಷಾ ಶಿಕ್ಷಣದ ಪುಸ್ತಕಗಳಲ್ಲಿ

ಅವುಗಳ ವಿಸ್ತಾರ ಅಪೇಕ್ಷಿಸಿದ ರೀತಿಯಲ್ಲಿ ಇಲ್ಲ. ಮಕ್ಕಳಿಗೆ ಅರ್ಥಪೂರ್ಣವಾದ ಉತ್ತೇಜನ ನೀಡುವುದಕ್ಕೆ ಮತ್ತು ಅವರ ಸಾಮಥ್ರ್ಯದ ಬೆಳಣಿಗೆಯ ವಿಷಯಕ್ಕೆ ಹಿಂಜರಿಕೆಯಿದೆಯೋನೋ ಎಂದು ಭಾಸವಾಗುತ್ತದೆ. ಪಠ್ಯಪುಸ್ತಕಗಳ ಲೇಖಕರು ಸಿದ್ಧಪಡಿಸುತ್ತಿರುವ ಕಲಿಕೆಯ ಮಾಡಲ್ ಹೇಗಿದೆ ಎಂದರೆ ಅದರಲ್ಲಿ ಟೆಕ್‌ಸ್ಟ್‌ನ ಸರಳತೆ ಮತ್ತು ಅಭ್ಯಾಸದ ಸರಳತೆ ಎರಡೂ ಯಾಂತ್ರಿಕ ಆಧಾರಗಳ ಮೇಲೆ ನಿರ್ಣಯಿಸಲ್ಪಡುತ್ತಿವೆ. ಇದರಲ್ಲಿ ಕಲಿಸುವ ಸಿದ್ಧಾಂತಗಳು ಅವೇ ಆಗಿವೆ. ಅವುಳೆಂದರೆ ಪರಿಭಾಷೆ, ವಿಧಾನ(=ರೀತಿ) ಮತ್ತು ನಿಯಮಗಳನ್ನು ತಿಳಿಸಿ ಮಕ್ಕಳಿಗೆ ಇವುಗಳನ್ನು ಅನುಕರಿಸಿ ಪರಿಣತಿಯನ್ನು ಪಡೆದುಕೊಳ್ಳಿ ಎಂದು ಹೇಳುವುದು.

ಒಂದು ವೇಳೆ ನಾವು ಭಾಷೆಯನ್ನು ಕಲಿಸುವ ಗುರಿಗಳು ಮತ್ತು ಭಾಷೆಯನ್ನು ಹೇಗೆ ಕಲಿಸಲಾಗುತ್ತಿದೆ ಎಂಬುದರ ಬಗ್ಗೆ ಲಕ್ಷ್ಯಕೊಟ್ಟು ವಿಚಾರ ಮಾಡಿದ್ದೇ ಆದರೆ ಅದರಿಂದ ಅಭ್ಯಾಸದ ಪ್ರಕಾರಗಳಿಗೆ ಸಂಬಂಧಿಸಿದಂತೆ ಕೂಡ ಬಹಳಷ್ಟು ಸಂಗತಿಗಳು ತಿಳಿದುಬರುತ್ತವೆ. ಮೊದಲಿಗೇ ಹೇಳಬೇಕಾದ ಮಾತೆಂದರೆ ಭಾಷೆ ಎನ್ನುವುದು ಸಂವಾದ ಮತ್ತು ವಿಚಾರಗಳನ್ನು ರೂಪಿಸುವ ಸ್ರೋತ ಮತ್ತು ಮಾಧ್ಯಮವಾದ ಕಾರಣ ಕಲಿಯುವವನಿಗೆ ತನ್ನ ಜೊತೆಗಾರರು, ಶಿಕ್ಷಕರು, ಮತ್ತು ಇತರೆ ಜನರೊಂದಿಗೆ ಸಂವಾದಿಸುವ ಅವಕಾಶಗಳು ಇರಬೇಕಾದ್ದು ಅಗತ್ಯ ಎನ್ನುವುದು. ಅವನೊಂದಿಗೆ ಲಿಖಿತ ಟೆಕ್ಷ್ಟ ಜೊತೆಗೆ ಸಂವಾದದ ಅವಕಾಶಗಳು ಇರಬೇಕು. ತನ್ನ ವಿಚಾರಗಳು, ಕಲ್ಪನೆಗಳು, ಮತ್ತು ತಿಳಿವಳಿಕೆಯ ಬಗ್ಗೆ ತನ್ನೊಂದಿಗೆ ತಾನೆ ಸಂವಾದ ಮಾಡಿಕೊಳ್ಳುವ(=ಆತ್ಮ ಸಂವಾದ) ಕೆಲವು ಅವಕಾಶಗಳು ಇರಲಿ. ಈ ಎಲ್ಲ ಅವಕಾಶಗಳನ್ನು ನಿರ್ಮಿಸಿ ಕೊಡಲು ಪಠ್ಯಪುಸ್ತಕಗಳಲ್ಲಿ ಕೊಟ್ಟಿರುವ ಅಭ್ಯಾಸಗಳು ಮಹತ್ವದ ಮೂಲ ಧಾರೆಗಳು. ಆದ್ದರಿಂದ ಅಭ್ಯಾಸದಲ್ಲಿ ಮಕ್ಕಳಿಗೆ ಸಾಮೂಹಿಕ ಕಾರ್ಯಗಳನ್ನು ಮಾಡಲು ಕೊಡುವಾಗ, ಸಾರ್ಥಕವೂ, ಆಸಕ್ತಿಕರವೂ, ಅವರ ಸಂವಾದಗಳನ್ನು ಗಾಢಗೊಳಿಸುವಂಥವೂ ಅದ ಸಾಮೂಹಿಕ ಕಾರ್ಯಗಳನ್ನು ಮಾಡಲು ಕೊಡವುದು ಮಹತ್ವಪೂರ್ಣವಾದ್ದು.

ಟೆಕ್ಷ್‌ಟ್‌ಗೆ ಸಂಬಂಧಿಸಿದಂತೆ ಹಲವು ಬಗೆಯ ಅಭ್ಯಾಸಗಳು ಇರುವುದು ಸಾಧ್ಯ. ಅವು ಟೆಕ್ಸ್ಟ ನಲ್ಲಿ ವ್ಯಕ್ತವಾಗಿರುವ ವಿಚಾರಗಳೊಂದಿಗೆ ಅಂತರ್ಕ್ರಿಯೆಗಳನ್ನು ಮಾಡುವ ಸಲುವಾಗಿ, ಅವುಗಳನ್ನು ವ್ಯಾಖ್ಯಾನ ಮಾಡುವ ಸಲುವಾಗಿ, ಅವುಗಳಲ್ಲಿ ಕೆಲವು ಭಾಗಗಳನ್ನು ಬದಲಾಯಿಸಿ ಹೊಸ ಟೆಕ್‌ಸ್ಟ್‌ನ ಕಲ್ಪನೆ ಮಾಡುವ ಪ್ರಯತ್ನಗಳ ಸಲುವಾಗಿ ಆಗಬಹುದು. ಈ ಅಭ್ಯಾಸಗಳು ಟೆಕ್ಷ್ಟ ಅನ್ನು ಆಧರಿಸಿ ಚಿತ್ರಗಳನ್ನು ರಚಿಸುವುದು, ಯಾವುದಾದರೂ ಪಾತ್ರದ ಅಭಿನಯ ಮಾಡುವುದು, ಲಯಬದ್ಧವಾಗಿ ಕವಿತೆ ಇಲ್ಲವೆ ಗೀತವನ್ನು ಹಾಡುವುದು ಮತ್ತು ಅದನ್ನು ಮುಂದುವರಿಸುವ ಪ್ರಯತ್ನ ಮಾಡುವುದು ಇವೆಲ್ಲವುಗಳ ಸಲುವಾಗಿ ಇರಬಹುದು. ಈ ರೀತಿಯ ಬಹಳಷ್ಟು ಅಭ್ಯಾಸಗಳನ್ನು ಎನ್‌ಸಿಇಆರ್‌ಟಿಯ ಮತ್ತು ಒಂದೆರಡು ರಾಜ್ಯಗಳ ಪುಸ್ತಕಗಳಲ್ಲಿ ಕೂಡ ಕೊಡಲಾಗಿದೆ. ಉದಾಹರಣೆಗೆ ಬಿಹಾರ ರಾಜ್ಯದ ಪಠ್ಯಪುಸ್ತಕದಲ್ಲಿ ಕಥೆಗೆ ಸಂಬಂಧಿಸಿದಂತೆ-ಊರಿನ ಪಂಚರು ನೀಡಿದ ತೀರ್ಪು ಸರಿಯಾಗಿದೆಯೋ ಇಲ್ಲವೋ ಮತ್ತು ಅದರ ಹಿಂದಿರುವ

ಕಾರಣವೇನು ಎಂಬಂಥ ಪ್ರಶ್ನೆಯೂ ಇದೆ. ಈ ಬಗೆಯ ಪ್ರಶ್ನೆಗಳು ಎನ್‌ಸಿಇಆರ್‌ಟಿ ಹಾಗೂ ಇತರೆ ಕೆಲವು ರಾಜ್ಯಗಳ ಪುಸ್ತಕಗಳಲ್ಲಿ ಹಲವು ಕಡೆ ಇನ್ನು ಕೆಲವು ಪುಸ್ತಕಗಳಲ್ಲಿ ಕೆಲವೊಂದು ಕಡೆ ಸಿಗುತ್ತವೆ. ಈ ಪುಸ್ತಕಗಳಲ್ಲಿ ಇದಷ್ಟೇ ಅಲ್ಲದೆ ಭಾಷೆಯ ವೈಜ್ಞಾನಿಕ ಸಂರಚನೆಗೆ ಸಂಬಂಧಿಸಿದಂಥ ಕೆಲವು ಆಭ್ಯಾಸಗಳೂ ಇವೆ ಮತ್ತು ಅದನ್ನು ಅಭ್ಯಾಸ ಮಾಡಲು ನೆರವಾಗುತ್ತವೆ. ಆದರೆ ಬಹಳಷ್ಟು ರಾಜ್ಯಗಳ ಪುಸ್ತಕಗಳಲ್ಲಿ ಇಂಥ ಅಭ್ಯಾಸಗಳು ಸಿಗುವುದಿಲ್ಲ. ಇರುವ ಅಭ್ಯಾಸಗಳಲ್ಲಿ ಹಲವು ಬಗೆಯ ಉಪಯೋಗಕರವಲ್ಲದ ಉಚ್ಚಾರಣಗಳ ಅಭ್ಯಾಸ, ಸಂದರ್ಭಗಳ ಉಲ್ಲೇಖವಿಲ್ಲದ ಅರ್ಥಗಳು, ಟೆಕ್ಸ್ಟ್ ಆಧರಿಸಿದ ನೇರವಾದ ಪ್ರಶ್ನೆಗಳು ಮತ್ತು ವ್ಯಾಕರಣಭಾಗದಲ್ಲಿ ಶಬ್ದಗಳನ್ನು ವ್ಯಾಕರಣ ಘಟಕಗಳಲ್ಲಿ ಬೇರ್ಪಡಿಸಿರುವುದು ಸೇರಿವೆ. ಪ್ರಶ್ನೆಗಳ ಕೇಂದ್ರವೆಂದರೆ ಪುಸ್ತಕದ ಟೆಕ್ಸ್‌ಟ್‌ಗಳ ತುಣುಕುಗಳನ್ನು ಅರ್ಥಮಾಡಿಕೊಳ್ಳುವುದು, ಮತ್ತು ಅತ್ತ ಲಕ್ಷ್ಯವಹಿಸುವುದಾಗಿದೆ. ಪಾಠದ ಪೂರ್ಣ ಹಸ್ತಪ್ರತಿಯ ಮೇಲೆ ಅಭಿಪ್ರಾಯ ಹೇಳುವುದು, ಅದರ ಆಧಾರದ ಮೇಲೆ ಕೆಲವೊಂದು ಕಲ್ಪನೆಗಳನ್ನು ಮಾಡುವುದು, ಮತ್ತು ಅದರಲ್ಲಿ ಕೆಲವು ಹೊಸದನ್ನು ಸೇರಿಸುವುದು ಇವು ಇಲ್ಲವಾಗಿವೆ.

ಭಾಷೆಯ ಅಭ್ಯಾಸದ ವರ್ತುಲ ಪುಸ್ತಕದಲ್ಲಿ ಕೊಟ್ಟಿರುವ ಸಾಮಗ್ರಿಯೇ ಆಗಿದೆಯೆ ಇಲ್ಲವೆ ಇದರಲ್ಲಿ ಬೇರೆ ಇನ್ನಾವುದೇ ಟೆಕ್ಸ್ಟ್ (ಲಿಖಿತ ಅಥವಾ ಮೌಖಿಕ)ನಿಂದ ಅಂತರ್ ಕ್ರಿಯೆಗಳು ಮತ್ತು ಅದರ ಮೇಲೆ ಪರಿಶ್ರಮ ಮಾಡಬೇಕಾದ ಅಗತ್ಯ ಇದೆಯೆ ಎಂಬುದರ ಸೂಚನೆ ದೊರೆಯುವುದಿಲ್ಲ.

ಶಬ್ದಗಳನ್ನು ನಾಮಪದ, ಸರ್ವನಾಮ. ವಿಶೇಷಣ, ಕ್ರಿಯಾಪದವೇ ಮೊದಲಾದವುಗಳಾಗಿ ವಿಭಾಗಿಸುವುದು ಸಂದರ್ಭಾನುಸಾರವಾಗಿ ಇರುತ್ತದೆ ಎಂಬಂಥ ಭಾಷೆ ಮತ್ತು ಭಾಷೆಯ ಸಂರಚನೆಗೆ ಸಂಬಂಧಿಸಿದ ಈ ಬಗೆಯ ಎಚ್ಚರಿಕೆ ಪೂರ್ತಿ ಇಲ್ಲವಾಗಿದೆ. ಶಬ್ದಗಳನ್ನು ಈ ಶ್ರೇಣಿಯಲ್ಲಿ ವಿಂಗಡಿಸಬಹುದು ಮತ್ತು ಪುಸ್ತಕದಲ್ಲಿ ವಿಮರ್ಶೆಗನುಗುಣವಾಗಿ ಈ ಶ್ರೇಣಿಗಳೆಲ್ಲವೂ ಸ್ಥಿರವಾದವು ಎಂಬುದು ಭಾಸವಾಗುತ್ತದೆ ಎಂಬುದೇ ಅಭ್ಯಾಸದಲ್ಲಿನ ಅಪೇಕ್ಷೆ. ಉದಾಹರಣೆಗೆ ಓಡು, ಹಾಡು, ನೃತ್ಯಮಾಡು ಇವೆಲ್ಲವನ್ನೂ ಕ್ರಿಯೆಗಳೆಂದು ಮತ್ತು ಒಳ್ಳೆಯ, ದೊಡ್ಡದಾದ, ಕಚ್ಚಾ, ಹೊಳೆಯುವ ಇವೆಲ್ಲವನ್ನೂ ವಿಶೇಷಣಗಳೆಂದು ತಿಳಿಯಬೇಕು. ಇವೆಲ್ಲವೂ ಬೇರೊಂದೇ ಗುಂಪಿನಲ್ಲಿ ಬರುವಂಥ ವಾಕ್ಯಗಳನ್ನು ಯೋಚಿಸಬಹುದು. ಉದಾಹರಣೆಗೆ–" 'ಕಥಕ್' ಒಂದು ಬಗೆಯ ನೃತ್ಯ. ಆ ಹಾಡಿನಲ್ಲಿ ಗಾಯಕನ ಕಂಠ ಬಹಳ ಮಧುರವಾಗಿದೆ. ಅಥವಾ ನೀನಂತೂ ಇನ್ನೂ ಹುಡುಗ, ಹುಡುಗರು ಓಡುತ್ತಿದ್ದಾರೆ" – ಈ ಮೊದಲಾದವು.

ಎನ್‌ಸಿಇಆರ್‌ಟಿಯ ವ್ಯಾಸಂಗಕ್ರಮ ದಲ್ಲಿರುವ ಭಾಷೆಯ ವೈಜ್ಞಾನಿಕ ಪರೀಕ್ಷೆ ಎಂಬ ಮಾತೇನಿದೆ ಅದರ ನೋಟ ಈ ಪುಸ್ತಕಗಳಲ್ಲಿ ಸಿಗುವುದು ಬಹಳ ಕಡಿಮೆ. ಒಂದೇ ಶಬ್ದವನ್ನು ಬೇರೆ ಬೇರೆ ಶಬ್ದ ಭೇದಗಳ ರೂಪಗಳಲ್ಲಿ ಬಳಸ ಬಹುದಾದಂಥ ಅನೇಕ ಶಬ್ದಗಳು ಮತ್ತು ಅವುಗಳ ಬಳಕೆಗಳ ಸಂದರ್ಭವನ್ನು ಯೋಚಿಸಬಹುದು. ಈ ರೀತಿಯ ಉದಾಹರಣೆಗಳು

ಏಕಲವ್ಯದಿಂದ ಪ್ರಕಟಿಸಲ್ಪಟ್ಟ ಪ್ರಾಥಮಿಕ ಶಿಕ್ಷಣದ ಪುಸ್ತಕಗಳಾದ 'ಖುಶೀ-ಖುಶೀ' ಯ ಹೊರತಾಗಿ ಬೇರೇಲ್ಲೂ ಕಂಡುಬರುವುದಿಲ್ಲ. ಒಟ್ಟಾರೆ ಎನ್‌ಸಿಎಫ್ 2005 ರಲ್ಲಿ ಹೇಳಿರುವುದರ ಸ್ವಲ್ಪ ಮಟ್ಟಿನ ನೋಟ ಎನ್‌ಸಿಇಆರ್ಟಿ ಪಠ್ಯಕ್ರಮ ಮತ್ತು ಪಠ್ಯಪುಸ್ತಕದಲ್ಲಿ ಸಿಗುತ್ತದೆ. ಅದೇ ರೀತಿ ಕೆಲವೇ ಕೆಲವು ರಾಜ್ಯಗಳ ಪ್ರಥಮ ಭಾಷೆ ಹಿಂದೀ ಪುಸ್ತಕಗಳಲ್ಲಿ ಕಂಡುಬರುತ್ತದೆ. ಆದರೆ ಒಟ್ಟಾರೆ ಬಹಳಷ್ಟು ರಾಜ್ಯಗಳಲ್ಲಿ ಅಭ್ಯಾಸಗಳ ಸ್ವರೂಪ ಸೀಮಿತವೂ ಪಾಠಕೇಂದ್ರಿತವೂ ಆಗಿದೆ.

ಟೆಕ್ಸ್ಟ ನ ಆಯ್ಕೆ

ಟೆಕ್ಸ್ಟ ವಿವಿಧ ಪ್ರಕಾರಗಳದಾಗಿದ್ದು ಅದರಲ್ಲಿ ಎಲ್ಲ ಬಗೆಗಳೂ ಸೇರಿಕೊಂಡಿರಬೇಕು ಎಂದು ಸರಿಸುಮಾರು ಪ್ರತಿ ಪಠ್ಯಕ್ರಮದಲ್ಲೂ ಹೇಳಲಾಗಿದೆ. ಕೆಲವು ಪಠ್ಯಕ್ರಮಗಳಲ್ಲಿ ಟೆಕ್ಷ್‌ಟ್‌ನ ಆಯ್ಕೆಯ ಸಲುವಾಗಿ- ಟೆಕ್ಸ್ಟ ನಲ್ಲಿ ವಿಷಯಗತ ವೈವಿಧ್ಯವಿರಲಿ ಮತ್ತು ಕೆಲವು ಪಠ್ಯಗಳು ಓದುವುದಕ್ಕಾಗಿಯೇ ಇರಲಿ-ಎಂಬಂಥ ಇನ್ನು ಕೆಲವು ಸಾಮಾನ್ಯ ಸಂಗತಿಗಳನ್ನು ಹೇಳಲಾಗಿರುತ್ತದೆ. ಟೆಕ್ಸ್ಟ ಗಳು ಪ್ರಕೃತಿ ಸಂರಕ್ಷಣೆ, ಎಲ್ಲ ಸಂವಿಧಾನಾತ್ಮಕ ಮೌಲ್ಯಗಳು, ಭಾವನಾತ್ಮಕ ಏಕತೆ, ಸೇರ್ಪಡೆ, ಮಹಿಳಾ ಸಮಾನತೆ, ಸಂವೇದನೆ, ಸಾಮಾಜಿಕ ಏಕತೆಗಳಂಥ ವಿಷಯಗಳಿಂದ ಕೂಡಿದವಾಗಿರಬೇಕು. ಎನ್‌ಸಿಇಆರ್ಟಿ ಹೊರಡಿಸಿರುವ ದಾಖಲೆಪತ್ರದಲ್ಲಿ ಸಾಮಗ್ರಿಯು ಕಥಾತ್ಮಕವಾಗಿರಬೇಕು ಮತ್ತು ಮಾಹಿತಿಪೂರ್ಣವಾಗಿರಬೆಕು. ಸಾಮಗ್ರಿ ಏನಿದ್ದರೂ ಅದರ ಕಲಿಕೆಯಲ್ಲಿ ರೋಚಕತೆ ಕಳೆದುಹೋಗದಂಥದಾಗಿರಬೇಕು.

ಅಭ್ಯಾಸದ ಸಂದರ್ಭದಲ್ಲಿ ನಾವು ಹಲವಾರು ವಿಚಾರಗಳನ್ನು ಹೇಳಿದ್ದೇವೆ. ಅವುಗಳಲ್ಲಿ ಅಡಗಿರುವ ಅರ್ಥ ಟೆಕ್ಸ್ಟ ನ ಆಯ್ಕೆಗೂ ಸಂಬಂಧಿಸಿದೆ. ಟೆಕ್‌ಸ್‌ಟ್‌ಗಳು ಮಕ್ಕಳನ್ನು ಭಾವನಾತ್ಮಕವಾಗಿ ಮತ್ತು ಅವಧಾರಣಾತ್ಮಕವಾಗಿ ಒಗ್ಗೂಡಿಸುವಂಥವೂ ಅವರ ಕಲ್ಪನೆಯನ್ನು ಉದ್ದೀಪಿಸುವಂಥವೂ ಆಗಿರಬೇಕೆಂಬ ಸೂಚನೆ ಇದೆ. ಅವುಗಳಲ್ಲಿ ಕಾರ್ಯ-ಕಾರಣ ಸಂಬಂಧವನ್ನು ನಿರ್ಮಿಸಿಕೊಳ್ಳುವ ಅವಶ್ಯಕತೆ ಉಂಟು ಮಾಡುವಂಥ ಮತ್ತು ಅರ್ಥಮಾಡಿಕೊಳ್ಳಲು ಇಡೀ ಟೆಕ್ಸ್ಟ ಅನ್ನು ಓದುವ ಪ್ರೇರಣೆ ಇರಬೇಕು. ಪ್ರಾಥಮಿಕ ಹಂತದಲ್ಲಿ ಟೆಕ್‌ಸ್‌ಟ್‌ನ ಭಾಗಗಳನ್ನು ನಿರಂತರವಾಗಿ ಜೋಡಿಸುತ್ತ ಮತ್ತು ಕಟ್ಟುತ್ತ ಹೋಗುವ ಸಂಕೇತಗಳಿರಬೇಕು. ಭಾಷೆಯ ಯಾವ ಗುಣಗಳ ಅಧ್ಯಯನ ಮಾಡಲಿಚ್ಛಿಸುತ್ತೇವೋ ಅವುಗಳಿಗೆ ಇವುಗಳಲ್ಲಿ ಅವಕಾಶಗಳು ಮತ್ತು ಸಂಭಾವ್ಯತೆಗಳು ಇರಬೇಕು. ಆದ್ದರಿಂದ ಆಯ್ಕೆ ಮಾಡಿದ ಟೆಕ್ಷ್ಟ ಗಳು ಈ ಮುಖಗಳನ್ನು ಪರೀಕ್ಷಿಸುವ ಸಂಭವನೀಯತೆ ಹೊಂದಿರುವಂಥ ಮತ್ತು ಮಕ್ಕಳಿಗೆ ಒಂದು ರೀತಿಯಲ್ಲಿ ಅವುಗಳ ಪರಿಚಯ ಮಾಡಿಸುವಂಥವಾಗಿರಬೇಕು. ಲಿಂಗ, ಕಾಲ, ಕಾರಕ ಇತ್ಯಾದಿಗಳನ್ನು ಯಾವುದರ ಆಧಾರದ ಮೇಲೆ ನಿರ್ಧರಿಸಲಾಗುವುದೋ ಅಂಥ ವ್ಯಾಕರಣದ ಕಡೆಗೆ ಲಕ್ಷ್ಯಕೊಟ್ಟು ಇಲ್ಲಿ ಆ ನಿಯಮಗಳನ್ನು ತಿಳಿದುಕೊಳ್ಳುವ ಅಥವಾ ಆ ಸಾಮಗ್ರಿಗಳ ವಿಶ್ಲೇಷಣೆ ಮಾಡುವ ಅವಶ್ಯಕತೆಯಿಲ್ಲ. ಇದರ ಬದಲಿಗೆ ಭಾಷೆಯ ಸಂರಚನೆ ಕುರಿತು ಕೆಲಸ ಮಾಡುವ ಬೇರೆ ಬೇರೆ ರೀತಿಯಿಂದ ಅಭ್ಯಾಸ ಮಾಡುವ ಅವಕಾಶಗಳ ಅಗತ್ಯವಿದೆ. ಈಗ

ಬಾಲಕನಿಗೆ ಲಿಖಿತ ಭಾಷೆಯನ್ನು ಸರಿಯಾದ ರೀತಿಯಲ್ಲಿ ಬಳಸುವಲ್ಲಿ, ಅಥವ ಸುರಚಿತವಾಗಿ ಆಡಿದ ಭಾಷೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಹಾಗೂ ತನ್ನ ವಿಚಾರಗಳನ್ನು ಹೆಚ್ಚು ಸುಗಠಿತಗೊಳಿಸುವಲ್ಲಿ ನೆರವು ನೀಡುವಂಥ ಅ ಎಲ್ಲ ಅನುಭವಗಳಿಗೆ ತನ್ನನ್ನು ತೆರೆದುಕೊಳ್ಳುವ ಅಗತ್ಯವಿದೆ.

ಮಗುವಿನಿಂದ (ಬಾಲಕನ) ನಾವು ನಿರೀಕ್ಷಿಸುವ ಅಭಿವ್ಯಕ್ತಿಯ ಬಗ್ಗೆ ಯೋಚಿಸುವುದಾದರೆ, ಹೆಚ್ಚು ಕ್ಲೇಶವಿಲ್ಲದ ಅಭಿವ್ಯಕ್ತಿಗಳು ಮತ್ತು ಅವರಿಗೆ ಸಹಜವೂ ಸಾಮಾನ್ಯವೂ ಆದ ಅನುಭವದಿಂದ ಹೊರಹೊಮ್ಮುವ ಅಭಿವ್ಯಕ್ತಿಗಳ ಅವಕಾಶಗಳಿಂದ ಪ್ರಾರಂಭಿಸುವುದು ಮತ್ತು ನಿದನಿಧಾನವಾಗಿ ಹೆಚ್ಚು ವ್ಯಾಪಕವೂ ಆಳವೂ ಅದ ಅಭಿವ್ಯಕ್ತಿಗಳ ಕಡೆಗೆ ಹೋಗುವುದು ಉಚಿತವಾಗುತ್ತದೆ. ಇದರ ನಂತರ ಮಕ್ಕಳ ಅಭಿವ್ಯಕ್ತಿಗಳು ಕ್ರಮ ಕ್ರಮೇಣ ಹೆಚ್ಚು ಸುಗಠಿತವೂ ವ್ಯವಸ್ಥಿತವೂ ಅಗುವುದರ ಕುರಿತು ಪ್ರಯತ್ನಿಸಬೇಕು. ಬಾಲಕನನ್ನು(ಮಗುವನ್ನು) ಪ್ರಾಥಮಿಕ ತರಗತಿಯಲ್ಲಿ ಅಭಿವ್ಯಕ್ತಿಯಲ್ಲಿ ಹೆಚ್ಚು ಕುಶಲನನ್ನಾಗಿಸುವುದನ್ನು ನಮ್ಮ ಲಕ್ಷ್ಯವನ್ನಾಗಿ ಇಟ್ಟುಕೊಳ್ಳಬಹುದು. ಆದರೆ ಅಭಿವ್ಯಕ್ತಿಯ ಕೌಶಲ್ಯವು ಭಾಷಣದ, ಮಾತನಾಡುವ ಲಯವನ್ನಾಧರಿಸಿಲ್ಲ. ಕೈ ಬರವಣಿಗೆಯ ಅಂದ ಇಲ್ಲವೆ ವ್ಯಾಕರಣದ ಮಾನದಂಡದವನ್ನು ಕೂಡ ಅದು ಆಧರಿಸಿಲ್ಲ. ಅಭಿವ್ಯಕ್ತಿಯ ಬೆಳವಣಿಗೆ ಆ ಬಾಲಕನ ಮಾನಸಿಕ ಬೆಳವಣಿಗೆ, ಅವನು ಏನು ಹೇಳಬೇಕಾಗಿದೆಯೋ ಅದರ ವಿಚಾರದಲ್ಲಿ ಆಳವಾದ ತಿಳಿವಳಿಕೆ ಮತ್ತು ವ್ಯಾಪಕತೆ ಇವುಗಳನ್ನವಲಂಬಿಸಿದೆ. ಆದ್ದರಿಂದ ಮಾತು ಮತ್ತು ಬರಹದ ಬೆಳವಣಿಗೆಯನ್ನು ಕುರಿತು ನಾವು ಮಾತನಾಡುವಾಗ ಅದರಲ್ಲಿ ವ್ಯಾಕರಣ ಪೂರ್ತಿಯಾಗಿ ಸರಿಯಾಗಿರುವುದಾಗಲಿ, ಶಬ್ದಗಳ ವರ್ಣ, ಅವುಗಳ ಕ್ರಮ ಮತ್ತು ಉಚ್ಚಾರಣಾ ರೀತಿ ಇಲ್ಲವೆ ಅಕ್ಷರಗಳ ಆಕಾರವಾಗಲಿ, ಮಹತ್ವದ್ದಲ್ಲ ಬದಲಿಗೆ ಬಾಲಕನು ಯಾವ ವಿಷಯದ ಬಗ್ಗೆ ಅಭಿವ್ಯಕ್ತಿಸಲು ಬಯಸುತ್ತಾನೋ ಅದನ್ನವನು ಎಷ್ಟು ಚೆನ್ನಾಗಿ ತಿಳಿದಿದ್ದಾನೆ ಎಂಬುದರತ್ತ ಲಕ್ಷ್ಯ ವಹಿಸುವುದು ಅಗತ್ಯ. ಅದರಲ್ಲಿ ಅವನು ತನ್ನ ವಿಚಾರಗಳನ್ನು ವ್ಯವಸ್ಥಿತವಾಗಿ ಅಭಿವ್ಯಕ್ತ ಪಡಿಸಲು ಅವನ್ನು ಯಾವ ರೀತಿಯಲ್ಲಿ ಕಟ್ಟಿದ್ದಾನೆ, ಮತ್ತು ತನ್ನ ಕಡೆಯಿಂದ ಅಭಿವ್ಯಕ್ತಿಸಲು ಅವನ ಬಳಿ ಏನಿದೆ ಹಾಗೂ ಅವನು ಹೇಳುತ್ತಿರುವುದು ಹೇಗೆ ಹೆಚ್ಚು ಅರ್ಥಪೂರ್ಣ ಮತ್ತು ಮಹತ್ವಪೂರ್ಣವಾಗಲು ಹೆಚ್ಚು ರೋಚಕ ಮತ್ತು ಹೆಚ್ಚು ಗ್ರಾಹ್ಯವಾಗಲು ಸಾಧ್ಯವಾಯಿತು ಎಂಬ ಕಡೆಗೆ ನಮ್ಮ ಲಕ್ಷ್ಯವಿರಬೇಕು. ಆ ಕಾರಣದಿಂದಾಗಿಯೇ ಈ ರೀತಿಯ ಬರಹದ ರೀತಿಗೆ ಮುಖಾಮುಖಿಯಾಗಿಸುವುದನ್ನು ಸಾಧ್ಯವಾಗಿಸಲು ಆಯ್ಕೆಯಾದ ಪಾಠಗಳು ಹಾಗೂ ಗ್ರಂಥಾಲಯದಲ್ಲಿ ಲಭ್ಯವಿದ್ದ ಸಾಮಗ್ರಿಯಲ್ಲಿ ಆ ವಿವಿಧತೆ ಮತ್ತು ವ್ಯಾಪಕತೆ ಇರುವುದು ಅಗತ್ಯವಿದೆ. ಈ ಎಲ್ಲದರ ಒಟ್ಟಾರೆ ನಿಹಿತಾರ್ಥ ಟೆಕ್ಸ್ಟ ನಲ್ಲಿ ಪ್ರಕಾರಗಳು ಮತ್ತು ವಿಷಯಗಳಲ್ಲಿ ವೈವಿಧ್ಯವಿರುವುದರ ಜೊತೆಗೆ ಶೈಲಿಯಲ್ಲೂ ವೈವಿಧ್ಯವಿರಲಿ. ಸಾಂಸ್ಕೃತಿಕ ವೈವಿಧ್ಯವಷ್ಟೇ ಅಲ್ಲದೆ ಈ ವೈವಿಧ್ಯದಲ್ಲಿ ವಿಜ್ಞಾನ, ಸಾಮಾಜಿಕ ಅಧ್ಯಯನ, ಗಣಿತ ಮೊದಲಾದ ಪಾಠಗಳಲ್ಲಿ ಕೂಡ ವೈವಿಧ್ಯದ ಹೊಳಪು ಇರಲಿ ಎಂಬುದು.

ಭಾಷೆ ಮತ್ತು ಸಂಸ್ಕೃತಿ

ಭಾಷೆಯು ಮನುಷ್ಯನ ಅಂತರಂಗದೊಂದಿಗೆ ಲಗತ್ತಾಗಿದೆ ಮತ್ತು ಅದು ವ್ಯಕ್ತಿಯನ್ನು ರೂಪಿಸುತ್ತದೆ. ಈ ಕಾರಣಗಳಿಂದ ಭಾಷೆಯನ್ನು ಕಲಿಯುವ ಸಮಯದಲ್ಲಿ ಬಾಲಕನು ಅವನ ಅಕ್ಕ ಪಕ್ಕ ಎಂಥ ರೀತಿ–ರಿವಾಜುಗಳಿವೆ, ಜನರು ಆಲೋಚಿಸುವ ರೀತಿ(ವಿಧಾನ) ಯಾವುದು, ಬಗೆಬಗೆಯ ಪರಿಸ್ಥಿತಿಗಳೊಂದಿಗೆ ಜನರು ಹೇಗೆ ಪ್ರತಿಕ್ರಿಯಿಸುತ್ತಾರೆ, ಅಥವಾ ಯಾವುದಾದರೂ ವಿಷಯಗಳ ಮೇಲೆ ತಮ್ಮ ಅಭಿಪ್ರಾಯ ರೂಪಿಸಿಕೊಳ್ಳುವ, ದೃಢತೆಯಿಂದ ಯಾವುದಾದರೂ ವಿಶಿಷ್ಟ ನಿಲುವು ತೆಗೆದುಕೊಳ್ಳುವ ಅಳತೆಗೋಲುಗಳು ಮತ್ತು ವಿಧಾನಗಳು ಎಂಥವು ಎಂಬಿವುಗಳನ್ನೂ ಕಲಿಯುತ್ತಾನೆ. ಈ ಎಲ್ಲವುಗಳ ಬಗ್ಗೆ ನಾವು ಯೋಚಿಸಿದರೆ ಇದೆಲ್ಲವೂ ಒಂದು ರೀತಿಯಲ್ಲಿ ಬಾಲಕನ ಸರಿ ತಪ್ಪುಗಳ ತೀರ್ಮಾನಗಳು ಮತ್ತು ನೈತಿಕ ಆಯ್ಕೆಗಳ ಸಿದ್ಧತೆಯ ಭಾಗವಾಗಿದೆ. ಶಾಲೆಯ ಒಂದು ಪ್ರಮುಖ ಜವಾಬ್ದಾರಿ ಎಂದರೆ ಅದು ಬಾಲಕನನ್ನು(ಮಗುವನ್ನು) ಸ್ವತಂತ್ರವಾಗಿ ಕಲಿಯಲು ಸಿದ್ಧಪಡಿಸಬೇಕು, ಎಂದು ಅಂಗೀಕರಿಸಲಾಗಿದೆ. ಹಾಗೆಯೇ ಅದು ಮಗು ಸ್ವತಂತ್ರವಾಗಿ ತನ್ನ ಮಾತನ್ನು ವ್ಯಕ್ತಪಡಿಸಲು ಸಿದ್ಧಪಡಿಬೇಕು. ಅದನ್ನು ಭಯರಹಿತನನನ್ನಾಗಿ ಮಾಡಬೇಕು, ಇತರೆಯವರ ವಿಷಯಕ್ಕೆ ಸಂವೇದನಾಶೀಲನನ್ನಾಗಿಸಬೇಕು. ಅಷ್ಟೇ ಅಲ್ಲದೆ ತನ್ನ ಜವಾಬ್ದಾರಿಯ, ಇತರೆಯವರ ವಿಷಯಕ್ಕೆ ತನ್ನ ಹೊಣೆಗಾರಿಕೆ ಮತ್ತು ತನ್ನ ಅಧಿಕಾರಗಳ ವಿಷಯಕ್ಕೂ ಅನುಭವವನ್ನು ತಂದುಕೊಡಬೇಕು. ಈ ಎಲ್ಲ ಸಂಗತಿಗಳ ಆಧಾರದ ಮೇಲೆ ಯಾವುದೇ ಪರಿಸ್ಥಿತಿಯಲ್ಲಿ ಯಾವ ಬಗೆಯ ನಿರ್ಧಾರ ಅವನಿಗೆ ಎಲ್ಲಕ್ಕಿಂತ ಉಚಿತವಾಬಗಲ್ಲುದು ಅವನೇ ತೀರ್ಮಾನಕ್ಕೆ ಬರುವಂತಾಗಬೇಕು. ಈ ಥರದ ನೈತಿಕ ಬೆಳವಣಿಗೆ ಕುರಿತು ನಾವು ಮಾತನಾಡುವಾಗ ಅದು ಕೇವಲ ಕಥೆಗಳಲ್ಲಿ ಮತ್ತು ಅವುಗಳಿಂದ ದೊರೆಯುವ ಉಪದೇಶಗಳನ್ನು ಪುನರಾವರ್ತನೆ ಮಾಡುವುದರಿಂದ ಅದು ಆಗುವುದಿಲ್ಲ. ಇದಕ್ಕಾಗಿ ಭಾಷಾ ತರಗತಿಯಲ್ಲಿ ಸರಿಯಾಗಿ ರಚಿತವಾಗಿರುವ ಟೆಕ್ಸ್ಟ ಜೊತೆಗೆ ವ್ಯಕ್ತಿಗತವಾದ ಮತ್ತು ಸಾಮೂಹಿಕ ಅಂತರ ಕ್ರಿಯೆಗಳು ಮತ್ತು ಪರಸ್ಪರ ವಿಮರ್ಶೆ ನಡೆಯಬೇಕು. ಬೇರೆ ಬೇರೆ ಪಾರ್ಶ್ವಗಳ(ಮಗ್ಗುಲುಗಳ) ಮೇಲೆ ಮಕ್ಕಳ ವಿಚಾರ ಮತ್ತು ತರ್ಕಗಳನ್ನು ಕೇಳಿಸಿಕೊಳ್ಳಬೇಕು. ಅದರಿಂದ ಅವರಿಗೆ ಯಾವುದು ಹೆಚ್ಚು ಸರಿಯಾದ್ದು ಮತ್ತು ಏತಕ್ಕಾಗಿ ಎಂದು ಮಕ್ಕಳು ತೆರೆದ ಮನಸ್ಸಿನಿಂದ ಯೋಚಿಸುವಂತಾಗಬೇಕು. ಕೇವಲ ಕೊಟ್ಟಿರುವ ನಿಯಮಗಳು ಇಲ್ಲವೆ ಸೂಚನೆಗಳನ್ನು ಪಾಲಿಸುವುದು ಮತ್ತು ಒಂದು ಬಗೆಯ ವಿಚರಗಳಗಳನ್ನೇ ಸರಿ ಎಂದು ಒಪ್ಪುವ ಬದಲು ಈ ಒಂದು ಕಣ್ನೆಲೆ(ಪರಿಪ್ರೇಕ್ಷ್ಯ) ಇರಬೇಕು. ಅದೆಂದರೆ ಬಾಲಕನು ನೈತಿಕ ನಿರ್ಣಯಗಳ ವಿಷಯದಲ್ಲಿ ಯೋಚಿಸಲಿ ಮತ್ತು ಬೇರೆ ಬೇರೆ ಸಂದರ್ಭಗಳಲ್ಲಿ ಮತ್ತು ಬೇರೆ ಬೇರೆ ಪರಿಸ್ಥಿತಿಗಳಲ್ಲಿ ತೆಗೆದುಕೊಂಡಂಥ ನೈತಿಕ ನಿರ್ಣಯಗಳನ್ನು ಕುರಿತಂತೆ ಅವನದೇ ಆದ ದೃಷ್ಟಿಕೋಣವನ್ನು ಬೆಳಸಿಕೊಳ್ಳಲಿ ಎನ್ನುವುದು ಕೂಡ ಭಾಷಾ ತರಗತಿಯ ಇನ್ನೊಂದು ಅರ್ಥ ಎನ್ನುವುದೇ ಆ ಕಣ್ನೆಲೆ. ಮಾನವ ಸಮಾಜ ಉಳಿದು ಬಾಳಬೇಕೆಂದರೆ, ಒಂದು ಪ್ರಜಾಪ್ರಭುತ್ವಾತ್ಮಕ ಸಮಾಜ ಉಳಿದು ಬಾಳಬೇಕೆಂದರೆ, ಯಾವ ನಿರ್ಣಯಗಳು ಅಥವಾ ನೈತಿಕ ಪಕ್ಷಗಳು ಅವಶ್ಯಕ ಎಂಬುದು ಅವನ ಅರಿವಿಗೂ ಬರಲಿ. ಯಾವ ಪರಿಸ್ಥಿತಿಗಳಲ್ಲಿ ಮತ್ತು ಯಾವ ಸಂದರ್ಭಗಳಲ್ಲಿ ಅವರು ನಿರ್ಣಯ ತೆಗೆದುಕೊಳ್ಳಬೇಕಾಗಿದೆ ಅದರಲ್ಲಿ ತಪ್ಪು–ಸರಿಗಳ ತೀರ್ಮಾನ ಸುಲಭವಾಗುವುದಿಲ್ಲ ಎಂಬಂಥ ಅವಕಾಶಗಳು ಅವರ

ಎದುರು ಬರುತ್ತವೆ. ಹೊಸ ಪರಿಸ್ಥಿತಿಗಳಲ್ಲಿ ಯಾವ ಹಾದಿ ಹೆಚ್ಚು ಸರಿಯಿರಬಹುದು ಎಂದು ಅವನು ಹೇಗೆ ಆಯ್ಕೆ ಮಾಡುತ್ತಾನೆ ಎಂಬಂಥ ಅನುಭವಗಳನ್ನು ತಂದುಕೊಡುವಂಥ ಅಭ್ಯಾಸಗಳು ಅವರಿಗೆ ಅಗತ್ಯವಿವೆ.

ಎರಡು ಮೂರು ಬೇರೆ ಬೇರೆ ಆಯ್ಕೆಗಳಿರುವಂಥ ಪರಿಸ್ಥಿತಿಗಳನ್ನು(ಸಂದರ್ಭಗಳನ್ನು) ಮಕ್ಕಳ ಎದುರು ಇಟ್ಟು, ಆ ಎಲ್ಲದರ ಹಿಂದೆ ಇರುವಂಥ ತರ್ಕಗಳನ್ನು ಮತ್ತು ಅವುಗಳಲ್ಲಿ ಪ್ರಯುಕ್ತವಾಗಿರುವ ದೃಷ್ಟಿಯನ್ನು ಮಕ್ಕಳು ಅರ್ಥಮಾಡಿಕೊಳ್ಳಲಿ ಎನ್ನುವುದು ಪ್ರಾಥಮಿಕ ತರಗತಿಗಳಲ್ಲಿ ಬಹುಶಃ ಬಹಳ ಕಷ್ಟವಾಗುತ್ತದೆ. ನಿಮ್ಮ ಮತ್ತು ನಿಮ್ಮ ಇತರೆ ಸಹೋದ್ಯೋಗಿಗಳ ಅಭಿಪ್ರಾಯ ಕುರಿತಂತೆ ಅವರಿಂದ ತುಲನೆ ಮಾಡಿಸಿ. ಇಷ್ಟಾದರೂ ಪ್ರತಿಯೊಂದು ಪರಿಸ್ಥಿತಿಯಲ್ಲೂ ಕೇವಲ ಒಂದು ನಿರ್ಣಯ ಮಾತ್ರ ಉಚಿತವಾದ ನಿರ್ಣಯವೆಂದು ತಿಳಿಯಲಾಗುವುದಿಲ್ಲ ಎಂಬುದನ್ನು ಬಾಲಕನಿಗೆ ಅನುಭವಕ್ಕೆ ಬರುವಂತೆ ಮಾಡುವುದು ಅಗತ್ಯ. ಅನೇಕ ವೇಳೆ ಸರಿಯಾದ ನಿರ್ಣಯವನ್ನು ಆಯ್ಕೆ ಮಾಡುವುದು ಸರಳವಾಗಬಹುದು. ಆದರೆ ಬಹಳಷ್ಟು ನಿರ್ಣಯಗಳಲ್ಲಿ ಅಸಮಂಜಸತೆಗಳು ಇರುತ್ತವೆ ಮತ್ತು ದೃಷ್ಟಿಕೋನದಲ್ಲಿ ವ್ಯತ್ಯಾಸವಿರುವ ಕಾರಣದಿಂದಲೂ ಈ ನಿರ್ಣಯಗಳು ಗೋಜಲಾಗುತ್ತವೆ. ಇದರ ಹಲವು ನಿದರ್ಶನಗಳು ನಮಗೆಲ್ಲ ಗೊತ್ತೇ ಇದೆ. ಅನೇಕ ಕಥೆಗಳಲ್ಲಿ ಮಕ್ಕಳು ಕೂಡ ಆಲಿಸುತ್ತಾರೆ. ಇವೆಲ್ಲವುಗಳ ಹೊರತಾಗಿಯೂ ನೈತಿಕ ಬೆಳವಣಿಗೆಯ ವಿಷಯದಲ್ಲಿ ತರಗತಿಯಲ್ಲಿ ಪ್ರಯೋಜನಕ್ಕೆ ಬರುವ ತಿಳಿವಳಿಕೆ ಬಹಳ ಸಂಕೀರ್ಣವಾಗುತ್ತದೆ. ಮಕ್ಕಳೊಂದಿಗೆ ನಡೆಸಲಾಗುವ ಬಹಳಷ್ಟು ಕಾರ್ಯಗಳು, ನಮ್ಮ ಶಾಲೆಯಿಂದ ಹೊರಹೋಗುವ ಮಕ್ಕಳು ಒಂದೇ ರೀತಿಯಲ್ಲಿ ಯೋಚಿಸುವ, ಒಂದೇ ಬಗೆಯ ನೈತಿಕ ನಿರ್ಣಯ ತೆಗೆದುಕೊಳ್ಳುವಂಥ ಮತ್ತು ಒಂದೇ ರೀತಿಯಲ್ಲಿ ವ್ಯವಹರಿಸುವಂಥವರಾಗಬೇಕು ಎಂಬ ಆಳತೆಯವೇ ಆಗಿರುತ್ತವೆ. ಭಾಷಾ ತರಗತಿಯ ಪ್ರಮುಖ ಲಕ್ಷ್ಯ ಇದೇ ಆಗಿಬಿಡುತ್ತದೆ. ಆದರೆ ಈ ರೀತಿ ಮಕ್ಕಳೊಂದಿಗೆ ನೈತಿಕ ನಿರ್ಣಯಗಳು ಮತ್ತು ಮೌಲ್ಯಗಳನ್ನು ಕುರಿತಂತೆ ಪ್ರಯತ್ನ ಮಾಡುವುದರಿಂದ ಅವರಲ್ಲಿ ತಮ್ಮ ದಾರಿಯನ್ನು ತಾವೇ ನಿರ್ಧರಿಸ ಬಲ್ಲ ಸಾಮರ್ಥ್ಯ ಬರುವುದಿಲ್ಲ. ಅಲ್ಲದೆ ಹೀಗೆ ಮಾಡುವುದರಿಂದ ಹೊಸ ಪರಿಸ್ಥಿತಿಗಳು ಎದುರಾದಾಗ ಏನು ಮಾಡಬೇಕೆಂಬುದು ಅವರಿಗೆ ಹೊಳೆಯುವುದಿಲ್ಲ. ಸಮಸ್ಯೆಗಳು ಎದುರಾದಾಗ ಮೌಲ್ಯಗಳನ್ನು ತೂಗಿನೋಡಿ ಮುಂದಿನ ಹೆಜ್ಜೆಯನ್ನು ಯೋಚನೆ ಮಾಡಬೇಕಾಗುತ್ತದೆ. ಅವರಲ್ಲಿ ಈ ಬಗೆಯ ನೈತಿಕ ಸಿದ್ಧತೆ ಉಪಯೋಗಕ್ಕೆ ಬರುವುದಿಲ್ಲ. ಅದೇ ರೀತಿ ಅವರ ಬಳಿ ಮಾಹಿತಿ ಬಂದಾಗ ಅಥವಾ ಯಾವುದಾದರೂ ವ್ಯಕ್ತಿ ಇಲ್ಲವೆ ಪರಿಸ್ಥಿತಿಯ ಬಗ್ಗೆ ಏನಾದರೂ ಹೇಳಿದಾಗ ಆಗಲೂ ಅವುಗಳನ್ನು ಅಂದಾಜಿಸಲು ಅವರು ಸಿದ್ದರಿರುವಂತೆ ತೋರುವುದಿಲ್ಲ. ಈ ಬಗೆಯ ಪರಿಸ್ಥಿತಿ ಅಥವಾ ಘಟನೆಯ ಸಂಭಾವ್ಯತೆ ಎಷ್ಟು ಎಂದು ಅವರು ಯೋಚಿಸುವುದಿಲ್ಲ. ಏನನ್ನು ಹೇಳಲಾಗಿದೆಯೋ ಅದರ ತಥ್ಯಗಳನ್ನೂ ಅವರು ತಮ್ಮ ತರ್ಕ, ತಮ್ಮ ಅನುಭವಗಳ ಆಧಾರದ ಮೇಲೆ ಬಳಕೆಮಾಡಿ ವಿಶ್ಲೇಷಣೆ ಮಾಡಲಸಮರ್ಥರಾಗಿರುತ್ತಾರೆ.

ಕೊನೆಯಲ್ಲಿ

ಸಾಮಾನ್ಯವಾಗಿ ಆಲಿಸುವುದು, ಬರೆಯುವುದು, ಮಾತನಾಡುವುದು, ಅಭಿವ್ಯಕ್ತಿ ಮತ್ತು ತಿಳಿದುಕೊಳ್ಳುವುದರಲ್ಲಿ ಭಾಷಾ ಶಿಕ್ಷಣದ ಗುರಿಗಳನ್ನು ವ್ಯಕ್ತಪಡಿಸಲಾಗುತ್ತದೆ. ಇವೆಲ್ಲವೂ ಭಾಷೆ ಮತ್ತು ತಿಳಿವಿನಲ್ಲಿ ಸೇರಿವೆ ಮತ್ತು ಒಂದಕ್ಕೊಂದು ಪರಸ್ಪರ ಸೇರಿಕೊಂಡಿವೆ. ಭಾಷೆ ಮತ್ತು ತಿಳಿವಿನ ಬೆಳವಣಿಗೆಯ ಸಲುವಾಗಿ ವಿವರಣೆ, ಘಟನಾಕ್ರಮ, ಸೂಚನೆ, ಕಲ್ಪನೆ, ಫ್ಯಾಂಟಸಿ, ತರ್ಕ ಮತ್ತು ರಚನೆ(ಮೌಖಿಕ ಮತ್ತು ಬರಹ ಎರಡೂ ಬಗೆಯವು) ಇವೆಲ್ಲವುಗಳ ಬಳಕೆ ಮಾಡಿಕೊಳ್ಳಬಹುದು ಹಾಗೂ ಇವುಗಳನ್ನು ಬೇರೆ ಬೇರೆ ವಿಧಗಳಲ್ಲಿ ಪ್ರಸ್ತುತಪಡಿಸಬಹುದು. ಈ ರೀತಿಯ ಪ್ರಸ್ತುತ ಪಡಿಸುವಿಕೆ ಮತ್ತು ವಿಮರ್ಶೆಯಲ್ಲಿ ಬಾಲಕನಿಗೆ(ಮಗುವಿಗೆ) ಸೃಷ್ಟಿಮಾಡುವ ಮತ್ತು ಅದನ್ನು ಪ್ರದರ್ಶಿಸುವ ಎರಡೂ ಬಗೆಯ ಅವಕಾಶಗಳು ಇದ್ದಲ್ಲಿ ಮಾತ್ರ ಇದೆಲ್ಲವೂ ಪ್ರಯೋಜನಕ್ಕೆ ಬರುತ್ತದೆ. ಒಟ್ಟಾರೆ ಭಾಷೆಯನ್ನು ಕಲಿಯುವ ಮತ್ತು ಕಲಿಸುವ ಕಣ್ಣೆಲೆಯನ್ನು ಗಮನದಲ್ಲಿಟ್ಟುಕೊಳ್ಳುವುದು ಹಾಗೂ ಭಾಷೆಯು ಮನುಷ್ಯರೊಂದಿಗೆ ಲಗತ್ತಾಗಿರುವಂಥದು ಮತ್ತು ಆ ಕಾರಣಕ್ಕಾಗಿ ಮನುಷ್ಯರ ಪರಸ್ಪರ ಸಂಬಂಧಗಳನ್ನು ಕಲಿಯುವ ಬಹಳ ದೊಡ್ಡ ಪ್ರಯೋಜನ ಎಂಬುದನ್ನು ಗಮನದಲ್ಲಿಟ್ಟುಕೊಳ್ಳವುದು ತೀರಾ ಅಗತ್ಯ. ಹಾಗಾಗಿ ತರಗತಿಗಳಲ್ಲಿ ಇಡೀ ತರಗತಿಯ ಹಂತದಲ್ಲಿ ಮಕ್ಕಳಲ್ಲಿ ಪರಸ್ಪರರ ಹಂತದಲ್ಲಿ ಎಲ್ಲ ಸಂಗತಿಗಳಲ್ಲಿ ಮಕ್ಕಳನ್ನು ಸ್ವಾಭಾವಿಕವಾಗಿ ಒಳಗೊಳ್ಳುವಂಥ ಬಹಳಷ್ಟು ಅಭ್ಯಾಸಗಳು ಇರುವಂಥ ಅವಕಾಶಗಳನ್ನು ನಿರ್ಮಿಸುವ ಅಗತ್ಯವಿದೆ.

ಪ್ರಾಥಮಿಕ ಹಂತದಲ್ಲಿ ಫೋಕಸ್ ಇರುವುದು ಉಚ್ಚಾರಣೆ, ಲಯದಲ್ಲಿ ಓದುವುದು, ಸುಂದರವಾದ ಅಕ್ಷರ ಬರೆಯುವುದು, ಸರಿಯಾಗಿ ಜಾಗ ಬಿಡುವುದು, ವ್ಯಾಕರಣದ ಪರಿಭಾಷೆಗಳನ್ನು ಹೇಳುವುದು ಮತ್ತು ವಾಕ್ಯಗಳಲ್ಲಿಯ ಸರಿ ತಪ್ಪುಗಳನ್ನು ಗುರುತಿಸಿ ಬೇರ್ಪಡಿಸುವುದು ಇಲ್ಲವೆ ವ್ಯಾಕರಣದ ಘಟಕಗಳನ್ನು ಪರಿಭಾಷಿತಗೊಳಿಸುವುದು ಇತ್ಯಾದಿಗಳ ಮೇಲೆ. ಇದರ ಬದಲು ಬಾಲಕನ ಭಾಷಿಕ ಮತ್ತು ಮಾನಸಿಕ ಬೆಳವಣಿಗೆಯ ಮೇಲೆ ಫೋಕಸ್ ಇರಲಿ. ಅದರಿಂದ ಅವನು ಭಾಷೆಯನ್ನು ಹೆಚ್ಚು ಸಮರ್ಥವಾಗಿ ಬಳಸಲು ಸಾಧ್ಯವಾಗುತ್ತದೆ. ಹಾಗೂ ಹೆಚ್ಚು ಗಾಢವಾಗಿ ಸಂವಾದ ಮಾಡಲು, ಸಂವಾದವನ್ನು ಅರ್ಥಮಾಡಿಕೊಳ್ಳಲು, ಹೆಚ್ಚು ಗಾಢವಾಗಿ ಓದಲು ಮತ್ತು ತನ್ನ ಬರವಣಿಗೆಯನ್ನು ತಾನೆ ಅರ್ಥಮಾಡಿಕೊಳ್ಳಲೂ ಸಾಧ್ಯವಾಗುತ್ತದೆ. ಜನರೂ ತಿಳಿದುಕೊಳ್ಳುವ ಮಟ್ಟಿಗೆ ತನ್ನ ಬರವಣಿಗೆಯನ್ನು ಅಭಿವೃದ್ದಿಪಡಿಸಬೇಕು. ಕ್ರಮೇಣ ಅದರಲ್ಲಿ ಹೆಚ್ಚಿನ ವಿವರಗಳು, ಇನ್ನೂ ಹೆಚ್ಚಿನ ಗಾಢ ವಿಶ್ಲೇಷಣೆ, ಹೆಚ್ಚು ವ್ಯಾಪಕ ಮತ್ತು ತರ್ಕಬದ್ದವಾಗಿರುವಂತೆ ಮಾಡಬೇಕು. ಬಾಲಕನಿಗೆ ತಪ್ಪು ಸರಿಗಳ ಬಗ್ಗೆ ತೀರ್ಮಾನ ತೆಗೆದುಕೊಳ್ಳುವುದನ್ನು, ನೈತಿಕ ನಿರ್ಣಯ ತೆಗೆದುಕೊಳ್ಳುವುದನ್ನು ಮತ್ತು ತನ್ನ ಸಂದರ್ಭ ಕುರಿತಂತೆ ಪ್ರಶ್ನಿಸುವುದನ್ನು ಕಲಿಸುವುದು ಕೂಡ ಭಾಷಾ ತರಗತಿಯ ಒಂದು ಹೊಣೆಗಾರಿಕೆ. ತನ್ನ ಸಂದರ್ಭದ ಬಗ್ಗೆ ಪ್ರಶ್ನೆ ಹಾಕುವುದರಿಂದಲೇ ಅವನು ಏನು ಯೋಚಿಸುತ್ತಿದ್ದಾನೋ, ಏನು ನಡೆಯುತ್ತಿದೆಯೋ ಅವೆರಡಕ್ಕೂ ಏನು ಸಂಬಂಧವಿದೆ ಎಂಬುದರ ಕುರಿತು ಅವನು ಅವನು ವಿಚಾರಮಾಡಲು ಸಮರ್ಥನಾಗುತ್ತಾನೆ. ಏನು ನಡೆಯುತ್ತಿದೆಯೋ ಅದಕ್ಕೂ ತನಗೂ ಯಾವ ಬಗೆಯ

ಸಂಬಂಧವಿರಲು ಸಾಧ್ಯ, ಏನು ನಡೆಯುತ್ತಿದೆಯೋ ಅದನ್ನು ಇನ್ನಷ್ಟು ಉತ್ತಮಪಡಿಸಲು ಸಾಧ್ಯ. ಕಾರಣ ಆ ಪ್ರಯತ್ನದ ಹೊರತಾಗಿ ಸಮಾಜದಲ್ಲಿ ಪರಿವರ್ತನೆ ತರುವ ಶಿಕ್ಷಣದ ಒಂದು ಪ್ರಮುಖ ಪಾತ್ರ(ರೋಲ್), ಪೂರ್ಣಗೊಳ್ಳುವುದಿಲ್ಲ. ಭಾಷಾ ತರಗತಿಯನ್ನು ಈ ಎಲ್ಲ ಸಂಗತಿಗಳನ್ನು ಗಮನದಲ್ಲಿಟ್ಟುಕೊಂಡೇ ರೂಪಿಸಬೇಕು.

ಪ್ರಾಥಮಿಕ ಹಂತದ ಕೊನೆ ಕೊನೆಗೆ ಬರುತ್ತ ಬಾಲಕನು ಗಳಿಸಿಕೊಳ್ಳಬೇಕಾದ ಒಂದು ಪ್ರಮುಖ ಸಾಮರ್ಥ್ಯವೆಂದರೆ ಓದುವುದನ್ನು ಕಲಿಯುವುದು  ಮತ್ತು ತನ್ನ ವಿಚಾರಗಳನ್ನು ಬರೆಯುವುದು. ಉಳಿದೆಲ್ಲ ಸಂಗತಿಗಳೂ ಈ ಎರಡೂ ಸಹಜವಾಗುವುದರ ಹಾದಿಯಲ್ಲಿನ ಮೆಟ್ಟಿಲುಗಳು. ಇದಕ್ಕಾಗಿ ಅನೇಕ ಸಂಗತಿಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಎಲ್ಲಕ್ಕಿಂತ ಮೊದಲಿನದು ಕೋಡ್ ಅನ್ನು ತಿಳಿದುಕೊಳ್ಳುವುದು  ಮತ್ತು ಓದುವುದರಲ್ಲಿ ವ್ಯತ್ಯಾಸವಿದೆ ಎಂಬುದು. ಅದೇ ರೀತಿ ಜೋರು ಜೋರಾಗಿ ವಾಚನ ಮಾಡುವುದು ಮತ್ತು ಓದುವುದರಲ್ಲಿ ವ್ಯತ್ಯಾಸವಿದೆ ಎಂಬುದು.  ಬರವಣಿಗೆಯ ಬಗ್ಗೆ ಯೋಚಿಸಿದಾಗ ನಕಲು ಮಾಡುವುದು ಮತ್ತು ಬರೆಯುವುದರಲ್ಲಿ ವ್ಯತ್ಯಾಸವಿದೆ.  ಯಾವುದಾದರೂ ಒಂದು ಸಂಗತಿಯನ್ನು ನೆನಪಿಟ್ಟುಕೊಂಡು ಹೇಳುವುದರಲ್ಲಿ ಮತ್ತು ಬರೆಯುವುದರಲ್ಲಿ ವ್ಯತ್ಯಾಸವಿದೆ.

ಎಷ್ಟೇ ಒಳ್ಳೆಯ ಪ್ರಬಂಧವಾಗಿರಲಿ, ಅಥವಾ ಕಥೆಯಾಗಿರಲಿ, ಅಥವಾ ಯಾವುದಾದರೂ ವಿವರಣೆಯಾಗಿರಲಿ, ಅದೇ ತಾನಾಗಿಯೇ ಮಾತನಾಡುವುದಕ್ಕೂ ತನ್ನ ಸ್ವಂತ ವಿಚಾರಗಳನ್ನು ವ್ಯಕ್ತಪಡಿಸುವುದಕ್ಕೂ ವ್ಯತ್ಯಾಸವಿದೆ. ಅಥವಾ ಯಾರೋ ಹೇಳಿದ ಮಾತುಗಳನ್ನು ಎರಡನೇ ಬಾರಿ ಪುನರಾವೃತ್ತಿ  ಮಾಡುವುದಕ್ಕೆ ವ್ಯತ್ಯಾಸವಿದೆ. ಇದೇ ರೀತಿ ಪರಿಭಾಷೆಗಳನ್ನು ತಾನೇ ಮಾಡುವುದಕ್ಕೂ ಮತ್ತು ತನ್ನ ವಿಚಾರಗಳನ್ನು ಮತ್ತು ಕೆಲಸ ಮಾಡುವ ವಿಧಾನವನ್ನು ತಾನೇ ರಚಿಸಿ ತನ್ನದೇ ಶಬ್ದಗಳಲ್ಲಿ ವ್ಯಕ್ತಪಡಿಸುವುದಕ್ಕೂ ತಿಳಿವನ್ನು ಪಡೆದುಕೊಳ್ಳುವುದಕ್ಕೂ ಬಹಳ ವ್ಯತ್ಯಾಸವಿದೆ. ಭಾಷಾ ಈ ಎಲ್ಲ ಮಗ್ಗುಲುಗಳನ್ನೂ ಗಮನದಲ್ಲಿಟ್ಟುಕೊಂಡೇ ಭಾಷಾ ಶಿಕ್ಷಣದ ಬೆಳವಣಿಗೆಯನ್ನು ಮಾಡಬೇಕಾಗುತ್ತದೆ. ಕಾರಣ, ಭಾಷಾ ಶಿಕ್ಷಣವು ಕೇವಲ ಅಕ್ಷರಗಳನ್ನು ಗುರುತಿಸುವುದು, ಸರಿಯಾಗಿ ವಾಚಿಸುವುದು, ಸರಿಯಾಗಿ ಉಚ್ಚರಿಸುವುದು, ಮತ್ತು ವ್ಯಾಕರಣದ ಜ್ಞಾನಕ್ಕಷ್ಟೇ ಸೀಮಿತಗೊಂಡುಬಿಟ್ಟರೆ ಭಾಷಾ ಶಿಕ್ಷಣದ ಮಹತ್ವದ ಮಗ್ಗುಲುಗಳೇನಿವೆ ಅವು ಪೂರ್ತಿ ಬಿಟ್ಟುಹೋಗುತ್ತವೆ. ಭಾಷೆಯೆಂದರೆ ಕೇವಲ ವಿಷಯವಲ್ಲ; ಮತ್ತು ಕೇವಲ ಮಾಧ್ಯಮವೂ ಅಲ್ಲ ಎಂಬ ಸಂಗತಿಯೂ ಈಗಾಗಲೇ ಬಂದುಹೋಗಿದೆ.  ಇದು ಕಲಿಯುವ, ಆಲೋಚಿಸುವ, ಮತ್ತು ತಿಳಿದುಕೊಳ್ಳುವ(ಅರ್ಥಮಾಡಿಕೊಳ್ಳುವ) ಆಧಾರವಾಗಿದೆ. ಇದರಲ್ಲಿ ನಮ್ಮ ಗುರುತು, ಅಸ್ಮಿತೆ, ತರ್ಕ, ಕಲ್ಪನೆ ಮತ್ತು ಬಹಳಷ್ಟು ಸೇರಿಕೊಂಡಿವೆ. ಇದರ ಆಧಾರದ ಮೇಲೆಯೇ ಇದರ ಬೆಳವಣಿಗೆ ಆಗುತ್ತದೆ. ಇದು ಪೂರ್ತಿ ವಿಷಯ ವಸ್ತುಗಳೊಂದಿಗೆ ಮತ್ತು ಪ್ರತಿಯೊಂದು ವಿಷಯದೊಂದಿಗೆ ಲಗತ್ತಾಗಿದೆ. ಹಾಗೂ ಇದರ ಬೆಳವಣಿಗೆ ಉಳಿದೆಲ್ಲ ವಿಷಯಗಳ ಬೆಳವಣಿಗೆಯೊಂದಿಗೆ ಲಗತ್ತಾಗಿದೆ. ‘ಇದು ಮನುಷ್ಯನ ಬೆಳವಣಿಗೆ ಮತ್ತು ಕಲಿಯುವವನ

ಬೆಳವಣಿಗೆಯ ಮಹತ್ವದ ಆಧಾರವಾಗಿದೆ. ಸಾಂಸ್ಕೃತಿಕ ಅನುಭವ, ಜನ ಮತ್ತು ಜೀವನದ ತಿಳಿವಳಿಕೆ, ಸಾಹಿತ್ಯ, ಅದರ ಆನಂದ ಮತ್ತು ಅದರಿಂದ ದೊರಕುವ ತಿಳಿವಳಿಕೆ ಇದರಿಂದಲೇ ಬರುತ್ತದೆ. ಇದು ನಮ್ಮ ಮಿದುಳುಗಳನ್ನು ತೆರೆಯಲು ಮತ್ತು ನಮ್ಮ ವಿಚಾರಗಳ ವಲಯವನ್ನು ವಿಸ್ತರಿಸಲು ಸಹ ಅಗತ್ಯವಾಗಿದೆ. ಇದರ ಜೊತೆ ಜೊತೆಯಲ್ಲಿ ನಮ್ಮ ಭಾವನೆಗಳು ಮತ್ತು ಸೌಂದರ್ಯವನ್ನು ತಿಳಿದುಕೊಳ್ಳುವ ಮತ್ತು ಅದರ ಆನಂದವನ್ನು ಪಡೆದುಕೊಳ್ಳುವ ಮತ್ತು ಅದನ್ನು ಮೆಚ್ಚುವ ಸಾಮರ್ಥ್ಯವನ್ನೂ ಹೆಚ್ಚಿಸುತ್ತದೆ. ಇದು ಕಲಿಯುವವನಿಗೆ ತನ್ನ ವಿಚಾರಗಳ ವಿಷಯದಲ್ಲಿ ಸಕಾರಾತ್ಮಕವಾಗಿ ಯೋಚಿಸುವ ಮಾಧ್ಯಮವೂ ಆಗ ಬಲ್ಲುದು. ಒಂದು ವೇಳೆ ಭಾಷೆಯು ಬಾಲಕನ(ಮಗುವಿನ) ಹತ್ತಿರದ್ದಾಗಿದ್ದರೆ ಮತ್ತು ಅವನ ಸಂದರ್ಭದ್ದಾಗಿದ್ದರೆ ಇದು ಅವನನ್ನು ಅವನ ಪರಿಸ್ಥಿತಿ ಮತ್ತು ಅನುಭವದೊಂದಿಗೆ ಜೋಡಿಸುವ, ಅವನೊಂದಿಗೆ ಅವನ ಅಂತರಕ್ರಿಯೆಗಳನ್ನು ಮಾಡುವ ಮತ್ತು ಅವುಗಳವರೆಗೂ ಹೊಸ ವಿಚಾರಗಳನ್ನು ತಲುಪಿಸುವ ಸಾಧನ ಕೂಡ ಆಗಬಲ್ಲುದು. ಇದು ಆಗುವುದರಿಂದ ಅವನು ತನ್ನ ಸಮುದಾಯ ಮತ್ತು ತನಗೆ ದೊರಕಿದ ಮೌಲ್ಯಗಳು ಮತ್ತು ನೈತಿಕ ನಿರ್ಣಯಗಳ ಆಧಾರದ ಮೇಲೆ ಕೇವಲ ವಿಚಾರ ಮಾಡುವುದಷ್ಟೇ ಅಲ್ಲದೆ ಅವನ ಜೊತೆ ಜೊತೆಯಲ್ಲೇ ಅವುಗಳ ಬೆಳವಣಿಗೆ ಕೂಡ ಮಾಡಬಲ್ಲನು ಮತ್ತು ಅವುಗಳನ್ನು ತಾಕಿಕ ರೂಪದಲ್ಲಿ ಅರ್ಥಮಾಡಿಕೊಂಡು ಅದನ್ನು ಬದಲಾಯಿಸಲೂ ಶಕ್ತನಾಗುತ್ತಾನೆ.